# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೨ ಜನವರಿ–ಜೂನ್ ೨೦೦೮ ಸಂಚಿಕೆ : ೦೨



ಸಂಪಾದಕರು

ಪ್ರೊ|| ಜೆ. ಅಬ್ದುಲ್ ಬಷೀರ್

ಡಾ|| ಎಚ್. ಶಶಿಕಲಾ



**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**

ಬಿ.ಎಂ.ಶ್ರೀ. ಕಲಾಭವನ (ರಿ.)

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೧೯

ದೂರವಾಣಿ : ೨೬೬೧೫೮೭೭



# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೨ ಜನವರಿ–ಜೂನ್ ೨೦೦೮ ಸಂಚಿಕೆ : ೦೨

ಸಂಪಾದಕರು

ಪ್ರೊ॥ ಜಿ. ಅಬ್ದುಲ್ ಬಷೀರ್



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ (ರಿ.)
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯
ದೂರವಾಣಿ : ೨೬೬೧೫೮೭೭, ಇಮೇಲ್

**KARNATAKA LOCHANA** – (Half yearly Research Journal)
Editor : Prof. G. Abdul Basheer, Published by B.M.Sri. Smaraka Prathistana, M.V.Si. P.G. Center, B.M.Sri. Kalabhavan, 3rd Main Road, Narasimharaja Colony, Bangalore - 560 019

Year : January-June 2008 (Vol. 22, No. 02),
Yearly Subscription: **Rs. 100/-** (for Libraries)
For Indivigual : **Rs. 50/-**
Singal issue: **Rs. 30/-**

ವಾರ್ಷಿಕ ಚಂದಾ : ರೂ. ೧೦೦/– (ಗ್ರಂಥಾಲಯಗಳಿಗೆ)
ಪ್ರತಿಷ್ಠಾನದ ಆಜೀವ ಸದಸ್ಯತ್ವ : ರೂ. ೫೦೦/–



ಮುದ್ರಣ
ಇಳಾ ಮುದ್ರಣ
ನಂ. ೩೬, ೪೦ ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು – ೫೬೦ ೦೨೬
ದೂರವಾಣಿ : ೨೬೭೫೭೧೫೯




# ಪರಿವಿಡಿ

# ಚಾರಿತ್ರಿಕ ಸಾಂಸ್ಕೃತಿಕ ತವನಿಧಿಯಾದ ಲಕ್ಕುಂಡಿ ಶಾಸನ : ಒಂದು ಒಳನೋಟ

• *ಸವಿತಾ ಸಿರಗೋಜಿ*

ಗದಗಿನ ಹತ್ತಿರ ಇರುವ ಲಕ್ಕುಂಡಿ ಎಂಬ ಗ್ರಾಮವು ಐತಿಹಾಸಕ ಸ್ಥಳ. ಅಲ್ಲಿರುವ ಶಿಲ್ಪಕಲೆಯ ವೈಭವವು ಕನ್ನಡ ನಾಡಿನ ಸಾಂಸ್ಕೃತಿಕ ಬದುಕಿಗೆ ಬೆಳಕನ್ನು ಚೆಲ್ಲುತ್ತದೆ. ವಿಶೇಷಿತಃ ಜೈನಬಸದಿಗಳ ಬಗ್ಗೆ ಆಳವಾಗಿ ಅಭ್ಯಾಸ ಮಾಡಿದಾಗ ಇತಿಹಾಸದ ಮೇಲೆ ಹೊಸ ಹೊಸ ವಿಚಾರಗಳು ಹೊರಗೆ ಬರುತ್ತವೆ. ಅತ್ತಿಮಬ್ಬೆಯ ಶಾಸನಗಳಲ್ಲಿ ೧೫೦೧ನೆಯ ಬಸತಿಯು ಅತ್ಯಂತ ಪ್ರಮುಖವಾದುದು. ಏಕೆಂದರೆ ಅಲ್ಲಿ ಅತ್ತಿಮಬ್ಬೆಯು ಬರೆಸಿರುವ ಶಾಸನವು ಲಭ್ಯವಿದೆ. ಆ ಶಾಸನದಲ್ಲಿ ರನ್ನನು ಸ್ತುತಿಸಿದ ಅತ್ತಿಮಬ್ಬೆಯ ಚಿತ್ರವು ಆ ಶಾಸನದ ಮೂಲಕ ಅಭಿವ್ಯಕ್ತವಾಗುತ್ತದೆ. ಆಕೆ "ಸಜ್ಜನೈಕ ಚೂಡಾಮಣಿ" ಎಂಬ ಬಿರುದಿಗೆ ಪಾತ್ರಳಾದವಳು. ಅವಳ ಧಾರ್ಮಿಕ ಪ್ರವೃತ್ತಿ, ಸಾಂಸ್ಕೃತಿಕ ನೆಲೆ ಆದರ್ಶಮಯವಾಗಿದ್ದು, ಪಂಪನಿಂದ ಅರಿಕೇಸರಿ, ಪೊನ್ನನಿಂದ ಜಿನಚಂದ್ರ, ಹರಿಹರನಿಂದ ಬಸವ–ಅಲ್ಲಮ, ರಾಘವಾಂಕನಿಂದ ಸಿದ್ಧರಾಮ ನೆನಪಿಗೆ ಬರುವಂತೆ, ರನ್ನನು ಅತ್ತಿಮಬ್ಬೆಯನ್ನು ತನ್ನ ಅಜಿತನಾಥಪುರಾಣದಲ್ಲಿ ನೆನೆದಿದ್ದಾನೆ. ಅಲ್ಲಿನ ಎಲ್ಲ ಮಾತುಗಳಿಗೂ ಈ ಶಾಸನ ಸಾಕ್ಷಿ ನುಡಿಯುತ್ತದೆ. ಈ ಶಾಸನವನ್ನು ಅಧ್ಯಯನ ಮಾಡುವುದರಿಂದ ಕರ್ನಾಟಕ ಜನತೆಯ ಸಂಸ್ಕೃತಿ ವಿರಳ ವಿರಳವಾಗಿ ಗೊತ್ತಾಗುತ್ತದೆ ಮತ್ತು ಆ ಶಾಸನವು ನೆಲೆಗೊಂಡ ಕಾಲದ ರಾಜರ ಆಡಳಿತ, ಸಾಮಾನ್ಯರ ಬದುಕು, ಧರ್ಮಸಹಿಷ್ಣುತೆ, ಗುಣಗೌರವಗಳೆಲ್ಲವೂ ಅದರ ಅಂತರ್‌ಧ್ವನಿಯಾಗಿ ಹೊರಹೊಮ್ಮಿ ಬದುಕಿನ ಮಹತ್ತ್ವವನ್ನು ತೋರಿಸುತ್ತದೆ. ಈ ಎಲ್ಲ ಅಂಶಗಳಿಂದ ಅತ್ತಿಮಬ್ಬೆಯ ಚಾರಿತ್ರ್ಯ, ಅವಳ ಸಾಧನೆಗಳು, ಅವಳ ವಿಶ್ವಂಭರ ಬದುಕುಗಳು

ಶಿಲಾ ನಿಕ್ಷಿಪ್ತಾಕ್ಷರಗಳಾಗಿ ಇಂದಿಗೂ ಸತ್ಯವನ್ನು ಸಾರುತ್ತ ಪ್ರೇರಣೆಯಾಗಿದೆ. ಅಂತೆಯೆ ಈ ಶಾಸನದ ಮಹತ್ತ್ವವು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ತ್ವಗಳಿಗೆ ಹಗಲು ದೀವಟಿಕೆಯಾಗಿದೆ.

ಲಕ್ಕುಂಡಿಯ ಶಾಸನದಲ್ಲಿ 'ಲಕ್ಕಿಗುಂಡಿ' ಎಂದು ಉಲ್ಲೇಖಿಸಲಾಗಿದೆ. ಈ ಶಾಸನವನ್ನು ಚಾಲುಕ್ಯ ಚಕ್ರವರ್ತಿಯ ಸೇನೆಗೆ ಅಧಿಪನಾದವನ ತಾಯಿಯಿಂದ ಸಮರ್ಪಿಸಲ್ಪಟ್ಟಿದೆ. ಈ ಶಾಸನದ ಕೊನೆಯಲ್ಲಿ "ಜಿನಧರ್ಮಾಂಬರ ರವಿ ಸಿರಪಾಳ ಶೆಟ್ಟಿಯಾತ್ಮಜನುದ್ಯತ್ ಚರಿತಂ ಬಾಹುಬಲಿ ಸವಿಸ್ತರದಿಂದಂ ಬರೆದನ್" ಎಂಬ ಮಾತಿದೆ. ಇದರಿಂದ ಸಿರಿಪಾಲನ ಮಗನಾದ ಬಾಹುಬಲಿಯು ಈ ಶಾಸನದ ಕರ್ತೃ ಎನ್ನಬಹುದು. ಆದರೆ ಈತನನ್ನು ಮೊದಲಿನ ಶಾಸನವನ್ನು ನಕಲಿಸಿದ ಲಿಪಿಕಾರ ಎಂದು ಭಾವಿಸಲಾಗಿದೆ.

ಈ ಶಾಸನದಲ್ಲಿ ೩೭ ಕಂಡಿಕೆಗಳಿದ್ದು ಅವು ಇತಿಹಾಸವನ್ನು ತೆರೆದಿಟ್ಟಿವೆ. ಈ ಶಾಸನದ ಸಂಖ್ಯೆ ೫೨ ಎಂದಿದೆ. ಜೈನಬಸದಿಯ ಆವರಣದಲ್ಲಿ ದೊಡ್ಡದಾದ ಶಿಲಾಫಲಕವೊಂದು ನಾಲ್ಕು ಚೂರುಗಳಾಗಿ ಬಿದ್ದಿದೆ. ಈ ಚೂರುಗಳ ಮೇಲೆ ೫೬ ಸಾಲುಗಳ ಒಂದು ಬರೆಹ ಇರುವುದು ಸ್ಪಷ್ಟವಿದೆ. ಇದನ್ನು ೫೩ನೆಯ ಶಾಸನ ಎಂದು ಅಂಕಿಸಲಾಗಿದೆ. ಈ ಐವತ್ಮೂರನೆಯ ಶಾಸನದ ಬಹುಭಾಗ ೫೨ನೆಯ ಶಾಸನದ ೬೨ ಸಾಲುಗಳು ಒಂದೇ ತೆರನಾಗಿವೆ. ಅತ್ತಿಮಬ್ಬೆ ಕೊಟ್ಟ ದತ್ತಿ, ಮಾಡಿದ ದಾನಧರ್ಮಗಳೆಲ್ಲ ಸಾಲುಗಳನ್ನು ಹೋಲುತ್ತವೆ. ಇದರಿಂದ ೫೩ನೆಯ ಶಾಸನದ ನಕಲಾಗಿ ನಮ್ಮ ಪ್ರಸ್ತುತ ೫೨ನೆಯ ಲಕ್ಕುಂಡಿಯ ಅತ್ತಿಮಬ್ಬೆಯ ಶಾಸನ ಇವು ರಚನೆಗೊಂಡಿವೆ ಎಂದು ಅರ್ಥವಾಗುತ್ತದೆ. ಇಂತಹ ಮಹತ್ತ್ವದ ಅಂಶಗಳಿಂದ ಕೂಡಿದ ಶಾಸನವು ಹಾಳಾಗಿ ಹೋಗಬಾರದೆಂದು ವಿವೇಕಿಗಳು ಈ ನಕಲಿನ ವ್ಯವಸ್ಥೆಯನ್ನು ಮಾಡಿರುವುದು ಸ್ತುತ್ಯರ್ಹ. ಆದರೆ ೫೨ನೆಯ ಶಾಸನದಲ್ಲಿ ೫೩ನೆಯ ಶಾಸನಕ್ಕಿಂತ ಹೆಚ್ಚಿನ ಸಾಲುಗಳಿವೆ. ಈ ಹೆಚ್ಚಿನ ಸಾಲುಗಳಿಂದಾಗಿ ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಒಂದು ಬಸದಿ ಕಟ್ಟಿಸಿದ ವಿಷಯ ತಿಳಿಯುತ್ತದೆ. ಈ ಬಸದಿಯನ್ನು ಸಿರಿಪಾಲ, ನಾಕಿ, ದೈವಭರತಾರ್ಯ ಮೊದಲಾದವರು ಜೀರ್ಣೋದ್ಧಾರ ಮಾಡಿದ ಸಂಗತಿ ಇದೆ. ಇದೆಲ್ಲ ೫೨ನೆಯ ಶಾಸನಕ್ಕೆ ಸೇರಿದ ವಿಷಯ; ಹೀಗಾಗಿ ೫೩ನೆಯ ಶಾಸನವೇ ಮೂಲ ಶಾಸನವೆಂದು ಊಹಿಸಬಹುದಾಗಿದೆ. ಬಾಹುಬಲಿಯಿಂದ ವಿಸ್ತೃತಗೊಂಡ ಶಾಸನವಿದು. ೫೨ನೆಯ ಶಾಸನದಲ್ಲಿ ೬೨ ಸಾಲುಗಳವರೆಗೆ ಅತ್ತಿಮಬ್ಬೆಯ ಪ್ರಸ್ತಾಪವು ಗಂಭೀರವಾಗಿ ಅಭಿವ್ಯಕ್ತಗೊಂಡಿರುವುದು ವಿಶೇಷ. ಆದ್ದರಿಂದ ೫೨ನೆಯ ಶಾಸನದಲ್ಲಿ ಇಬ್ಬರು ಕವಿಗಳ ಬರೆವಣಿಗೆ ಇದೆ. ಏಕೆಂದರೆ ದೇವಾಲಯದೊಂದಿಗೆ ಮೂಲ ಶಾಸನವು ಬಿದ್ದಿರಬೇಕು. ಜೀರ್ಣೋದ್ಧಾರ ಮಾಡಿ ಶಿಲಾಪಟ್ಟದ ಮೇಲೆ ಮತ್ತೆ ಉಲ್ಲೇಖಿಸಿ ಪ್ರಸಕ್ತ ಕಾಲದ ಬಾಹುಬಲಿ ಶಾಸನವು ಕೊನೆಗೆ ಸೇರಿದೆಯೆಂಬುವ ನಿರ್ಧಾರಕ್ಕೆ ಬರಬಹುದು. ಇದನ್ನೇ ತೀನಂಶ್ರೀ ಸ್ಪಷ್ಟಗೊಳಿಸಿದ್ದಾರೆ. ಈ ಶಾಸನದಲ್ಲಿರುವ ಅತ್ತಿಮಬ್ಬೆಯ ಗುಣ ಗೌರವಗಳ ಉಲ್ಲೇಖವು ರನ್ನನ ಅಜಿತತೀರ್ಥಂಕರಪುರಾಣದ ಭಾಗದಲ್ಲಿ ಉಲ್ಲೇಖಿತ ಭಾಗಕ್ಕೆ ಹೋಲುವುದರಿಂದ ಈ ಶಾಸನದ ಕವಿ ರನ್ನನೇ ಇರಬೇಕೆಂಬುದು ಸತ್ಯಕ್ಕೆ ತೀರ ಹತ್ತಿರ. ಈ ಹಿನ್ನೆಲೆಯಲ್ಲಿ ೫೩ನೆಯ ಮೂಲ ಶಾಸನವನ್ನು ಬರೆದವನು ಕವಿ ರನ್ನ. ೫೨ನೆಯ

ಶಾಸನವನ್ನು ವಿಸ್ತರಿಸಿಕೊಂಡು ಬರೆದವನು ಕವಿ ಬಾಹುಬಲಿ. ಈ ಶಾಸನದ ಕಾಲ ೧೦ನೆಯ ಶತಮಾನದ ಕೊನೆ ಇಲ್ಲವೇ ೧೧ನೆಯ ಶತಮಾನದ ಆರಂಭ.

ಈ ಶಾಸನವು ಈ ಕೆಳಗಿನ ಕೆಲ ಅಂಶಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ಆ ಅಂಶಗಳು ಇತಿಹಾಸದ ಮೇಲೆ ಹೊಸ ಹೊಳವು ನೀಡುವವು.

೧) ಇರಿವ ಬೆಡಂಗ ಸತ್ಯಾಶ್ರಯನಿಗೆ ತನ್ನ ತಂದೆಯಾದ ತೈಲಪನಿಗಿದ್ದಂತೆ ಆಹವಮಲ್ಲ ಎಂಬ ಬಿರುದಿತ್ತು.

೨) ಆಹವಮಲ್ಲ ಬಿರುದಾಂಕಿತ ಸತ್ಯಾಶ್ರಯನು ಗೂರ್ಜರ ದೇಶವನ್ನು ಗೆದ್ದದ್ದು ದಾಖಲಾಗಿರುವುದು.

೩) ಅತ್ತಿಮಬ್ಬೆಯ ವಂಶ ವಿವರಗಳೊಂದಿಗೆ ಆಕೆಯ ದೀರ್ಘ ಸ್ತುತಿ ಇದೆ.

೪) ಅತ್ತಿಮಬ್ಬೆ ಮತ್ತು ಲೊಕ್ಕಗುಂಡಿಯ ಸಾಸಿವರರು ಕೊಟ್ಟ ದಾನದತ್ತಿಗಳನ್ನು ದಾಖಲಿಸಿರುವುದು. ಹಾಗೆಯೇ ಆಕೆಯ ವ್ಯಕ್ತಿತ್ವ ಚಿತ್ರವು ಪವಾಡಗಳೊಂದಿಗೆ ನಿರೂಪಿತವಾಗಿರುವುದು.

೫) ಕಲ್ಯಾಣ ಚಾಲುಕ್ಯರ ಕಾಲದ ಜೈನ ಸ್ಥಿತಿಗತಿಗಳ ಇಣುಕು ನೋಟ.

೬) ಸಂಸ್ಕೃತಿಯ ದೃಷ್ಟಿಯಿಂದ ಪಗರಣ, ಬಾದುಬ್ಬೆ ಪರ್ವ ಇತ್ಯಾದಿ ವಿಷಯಗಳ ಪ್ರಸ್ತಾಪ.

೭) ಅಕ್ಷಸಬಲ, ಏಳಪುಂಡ, ಕುಪ್ಪುಕುಜೆ ಮೊದಲಾದ ತೆರಿಗೆ ವಾಚಕಗಳ ಉಲ್ಲೇಖ.

೮) ರನ್ನನೇ ಗ್ರಾಂಥಿಕ ಶೈಲಿಯಲ್ಲಿ ಬರೆದ ಮೊದಲ ಶಾಸನ ಕವಿ.

**ಚಾರಿತ್ರಿಕ ಅಂಶಗಳು**

ಚಕ್ರವರ್ತಿ ದತ್ತಿಯೆಂದು ಪ್ರಸ್ತಾಪವಿರುವ ಈ ಶಾಸನದಲ್ಲಿ ಆ ಚಕ್ರವರ್ತಿ ಆಹವಮಲ್ಲನೆಂಬ ಬಿರುದಾಂಕಿತ (೯೯೭-೧೦೦೮)ರ ವರೆಗೆ ಆಳಿದ ತೈಲಪನ ಮಗನಾದ ಇಜಿವಬೆಡಂಗ ಸತ್ಯಾಶ್ರಯನೇ ಎಂದು ಸ್ಥಾಪಿಸಲು ಮೌಲಿಕ ದಾಖಲೆಗಳಿವೆ. ಆತನ ವಿಜಯಗಳಲ್ಲಿ ಅತ್ಯಂತ ಪ್ರಮುಖನಾದ ಗೂರ್ಜರರನ್ನು ಗೆದ್ದ ಮಾತು ಇಲ್ಲಿ ಕಣ್ಣಿಗೆ ಬೀಳುತ್ತದೆ. ರನ್ನನ ಗದಾಯುದ್ಧದಲ್ಲಿ 'ನರಪತಿ ತೈಲಪಂ ಬೆಸಸೆ' ಎಂದು ಬಂದ ಮಾತು ಈ ಸಂದರ್ಭಕ್ಕೆ ಬೆಂಬಲ ನೀಡುತ್ತದೆ. ಚಾಲುಕ್ಯರಿಗೆ ಆಪ್ತಸಚಿವನೂ ಭುಜದಂಡನೂ ಆದ ಧಲ್ಲನ ಬಗ್ಗೆ ತಿಳಿದುಬರುತ್ತದೆ. ಆತನ ವಂಶಕ್ಕೆ ಸಂಬಂಧಪಟ್ಟ ಸಾಕಷ್ಟು ಮಾಹಿತಿಯು ಸಂಗ್ರಹವಾಗಿದೆ. ಈ ಧಲ್ಲನ ಹಿರಿಯ ಮಗನೇ ನಾಗದೇವ. ಈ ನಾಗದೇವನ ಪತ್ನಿಯೇ ಪ್ರಸಿದ್ಧಳಾದ ಅತ್ತಿಮಬ್ಬೆ. ಅವರ ಮಗನೇ ಪಡೆವಲತೈಲ, ಆ ನಾಗದೇವನನ್ನು 'ಒಜಿಟರಮಲ್ಲ' ಎಂದು ರನ್ನ ಕರೆದಿದ್ದಾನೆ. ಆತನೊಬ್ಬ ಶೂರ ಧೀರನೆಂಬ ವಿಶ್ಲೇಷಣೆಯು ಇಲ್ಲಿದೆ. ಅಂತೆಯೇ ಅವನು ಆಹವಮಲ್ಲನ ಸೇನಾಪತಿ ಹಾಗೂ ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆಯೂ ಈತನ ಎರಡನೆಯ ಪತ್ನಿ.

ಈ ಶಾಸನದ ಸಮಗ್ರ ಪಾಠವನ್ನು ಅನುಲಕ್ಷಿಸಿದರೆ, ಅತ್ತಿಮಬ್ಬೆ ಕವಿವರ ಕಾಮಧೇನು,

ಕಟಕ ಪವಿತ್ರೆ, ಜಿನಧರ್ಮ ಪತಾಕೆ, ದಾನಚಿಂತಾಮಣಿ ಅತ್ತಿಮಬ್ಬೆ. ಆಕೆ ಧಾರ್ಮಿಕ ಕಾರ್ಯಗಳನ್ನು ಮಾಡಿರುವ ಕೆಲವು ಪ್ರಮುಖ ಅಂಶಗಳನ್ನು ಈ ರೀತಿ ಗ್ರಹಿಸಬಹುದು.

೧) ೧೫೦೦ ಜಿನಪ್ರತಿಮೆಗಳನ್ನು ೧೫೦೦ ಬಸದಿಗಳನ್ನು ನಿರ್ಮಿಸಿದಳು.

೨) ಅವೆಲ್ಲವುಗಳನ್ನು ಮೀರಿಸಿದ ಲಕ್ಕುಂಡಿಯ ಬಸದಿಯನ್ನು ೧೫೦೧ನೆಯ ಬಸದಿಯಾಗಿ ನಿರ್ಮಿಸಿದಳು.

೩) ತಳವೃತ್ತಿಯ ದತ್ತಿಗಳನ್ನು ಬಿಟ್ಟಳು.

ಇದೇ ರೀತಿ ಅವಳ ಪವಾಡಗಳ ಪಟ್ಟಿಯನ್ನು ಸಂಗ್ರಹಿಸಬಹುದಾಗಿದೆ.

೧) ಶ್ರವಣಬೆಳಗೊಳದ ಗೊಮ್ಮಟನನ್ನು ನೋಡಲು ಮೇಲೆ ಹತ್ತುವಾಗ ಅಕಾಲ ವೃಷ್ಟಿಯಾಯಿತು.

೨) ಜಿನವಿಗ್ರಹವನ್ನು ತಲೆಯ ಮೇಲೆ ಹೊತ್ತು ಬರುವಾಗ ತುಂಬಿ ಹರಿವ ಗೋದಾವರಿ ಪ್ರವಾಹ ಉಡುಗಿತು.

೩) ಸೆರೆ ಕಿತ್ತು ಬಂದ ಆನೆ ಈಕೆಯ ಪಾದಕ್ಕೆರಗಿತು.

೪) ನೀರಿನಲ್ಲಿ ಕೈಜಾರಿ ಬಿದ್ದ ಜಿನ ಬಿಂಬವು ಆಕೆಯ ಎಂಟು ದಿವಸಗಳ ಉಪವಾಸ ಮಹಿಮೆಯಿಂದ ಮೇಲೆ ಬಂದಿತು.

೫) ರಾಜಧಾನಿಯಲ್ಲಿ ವ್ಯಾಪಿಸಿದ್ದ ಭಯಂಕರವಾದ ಅಗ್ನಿ, ಈಕೆಯಿಂದ ಚಿಮಿಕಿತವಾದ ಗಂಧೋದಕದಿಂದ ಶಮನವಾಯಿತು.

ಈ ಪವಾಡಗಳೆಲ್ಲ, ಅದೇ ಕಾಲದಲ್ಲಿ ಆಕೆಯ ಸಾಮೀಪ್ಯ ನೆಲೆಸಿದ್ದ ರನ್ನನೇ ಬರೆದಿರುವುದರಿಂದ ಈ ಪವಾಡಗಳು ಕಾಲ್ಪನಿಕವಾಗಿರಲಾರವು. ಮಹಿಮೆಯ ಬಲದ ಘಟನೆಗಳು ಸಂಸ್ಕೃತಿಯ ಸಾಧ್ಯಿಕರಣಕ್ಕೆ ತೆರೆದಿಟ್ಟ ಪುಟಗಳು.

ಈ ಶಾಸನದಲ್ಲಿ ಅತ್ತಿಮಬ್ಬೆಯ ಪೂರ್ವಜರ ವಿವರಗಳೆಲ್ಲ ಲಭ್ಯವಿವೆ. ಮಲ್ಲಪ್ಪಯ್ಯ ಅಪ್ಪಕಬ್ಬೆಯರ ಮಗಳು ಈಕೆ. ಅದರಂತೆ ಇನ್ನೊಬ್ಬ ಮಗಳು ಗುಂಡಮಬ್ಬೆ. ಇವರಿಬ್ಬರೂ ನಾಗದೇವನ ಪತ್ನಿಯರೆಂಬುದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ನಾಗದೇವನು ರಣರಂಗದಲ್ಲಿ ಮಡಿದಾಗ ಎರಡನೆಯ ಪತ್ನಿ ಗುಂಡಮಬ್ಬೆ ಸಹಗಮನ ಮಾಡಿದಳು. ಇದರಿಂದಾಗಿ ತೈಲನನ್ನು ಬೆಳೆಸುವ ಹೊಣೆ ಅತ್ತಿಮಬ್ಬೆಯದಾಯಿತು. ಆಕೆಯ ಕೆಚ್ಚನ್ನು ರನ್ನನು ಅಜಿತನಾಥಪುರಾಣದಲ್ಲಿ "ಮೊಲೆವೆತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮೀಸೆ ವೊತ್ತಣ್ಣಂಗಳ್" ಎಂದು ಅಭಿಮಾನದ ಮಾತಿನ ಮಾಣಿಕ್ಯಗಳಿಂದ ಆಕೆಯ ಗೌರವವನ್ನು ಹೆಚ್ಚಿಸಿರುವುದೆಲ್ಲ ಈ ಶಾಸನದಲ್ಲಿ ಧ್ವನಿತವಾಗಿದೆ. ಇದರಿಂದಾಗಿ ಈ ಶಾಸನದಲ್ಲಿ ಆಕೆಯ ಚಿತ್ರವು ಸುವರ್ಣದ ಚಿತ್ರವಾಗಿ ರೇಖಿತವಾಗಿದೆ. ಇದು ಕಣ್ಣಿಗಷ್ಟೇ ಅಲ್ಲ ಮನಕ್ಕೂ ಮನನಕ್ಕೂ ಆಪ್ಯಾಯಮಾನ.

ಈಕೆ ಸಾಹಿತ್ಯ ಚಿಂತಾಮಣಿಯೂ ಹೌದು. ಶಾಂತಿಪುರಾಣದ ಒಂದು ಸಹಸ್ರ ಪ್ರತಿ

ಮಾಡಿಸಿ ಹಂಚಿದ್ದು, ಅದೇ ರೀತಿ ಅಜಿತತೀರ್ಥಂಕರಪುರಾಣದ ಸಹಸ್ರ ಪ್ರತಿಗಳನ್ನು ಮಾಡಿಸಿದ್ದು ಕೂಡ ಇಲ್ಲಿ ನೆನೆಯಲೇಬೇಕು. ಏಕೆಂದರೆ ಆಕೆ ಕವಿವರ ಕಾಮಧೇನು. ಆಕೆಯ ಮನೆ ಕಾವ್ಯವಾಚನ, ಗಮಕ, ಸಾಹಿತ್ಯ ಮತ್ತು ಶಾಸ್ತ್ರ ವಿವೇಚನೆಗಳಿಗೆ ಮಹಾಮಂಟಪ. ಅಂದಿನ ಮಹಾಮನೆ ಶಿಲಾ ನಿಷಿಪ್ತಾಕ್ಷರದಲ್ಲಿ ನಿಂತಿರುವ ಮಾತು. ಇಷ್ಟೆಲ್ಲ ದಾರ್ಶನಿಕತೆ ಆಕೆಯಲ್ಲಿ ಮೂಡಬೇಕಾದರೆ, ಆಕೆಗೆ ಗುರುಕರುಣೆಯು ಯೌವನದಲ್ಲಿ ಅಜಿತಸೇನಾಚಾರ್ಯರು, ಅರ್ಹನಂದಿ ಆಚಾರ್ಯರು ಅನುಗ್ರಹಿಸಿದ್ದೇ ಈ ಸಾಂಸ್ಕೃತಿಕ ಧಾರ್ಮಿಕ ಸಂಪತ್ತಿನ ಕಲ್ಪವೃಕ್ಷ ಕಾಮಧೇನು-ಅತ್ತಿಮಬ್ಬೆಯೆಂಬುದಕ್ಕೆ.

ಇಂತಹ ಈಕೆ ಚೇತನಾಮಯಿ. ದೇಶ ಸುತ್ತಿ ಕೋಶ ತುಂಬಿದವಳು. ಆಕೆ ೧೦-೧೧ ನೆಯ ಶತಮಾನದಲ್ಲಿ ಕೈಕೊಂಡ ಪ್ರವಾಸಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಆಕೆ ಮತ್ತು ಅವರ ಮನೆತನದ ಸಂಪರ್ಕ ಕಾವೇರಿಯಿಂದಮಾಗೋದಾವರಿ ಕವಿರಾಜ ಮಾರ್ಗಕಾರನ ಮಾತಿಗೆ ಪುರಾವೆ ಅತ್ತಿಮಬ್ಬೆ ಮತ್ತು ಅವಳ ಪ್ರವಾಸ-ಹೀಗೆ ವಿಸ್ತೃತಗೊಂಡ ಈಕೆಯ ವ್ಯಕ್ತಿತ್ವದಲ್ಲಿ ಶಾಸನದಲ್ಲಿರುವ ಈ ಮಾತುಗಳೆಲ್ಲ ಸಾರ್ಥಕಗೊಂಡತಹವೇ ಆಗಿವೆ.

"ದಾನದಲ್ಲಿ, ಶೀಲದಲ್ಲಿ, ಉಪವಾಸ ವ್ರತಾಚರಣೆಯಲ್ಲಿ, ಬಸದಿ ಕಟ್ಟಿಸುವುದರಲ್ಲಿ, ಪಾತಿವ್ರತ್ಯದಲ್ಲಿ-ಸೀತೆ, ಪಾವರ್ತಿ, ರುಕ್ಮಿಣಿ, ಯಕ್ಷಿ, ಜಿನಶಾಸನ ದೇವತೆಯಂತೆ ಅತ್ತಿಮಬ್ಬೆ ದೈವಾಂಶ ಸಂಭೂತಳು, ಅನಾದೃಶಳು. ಇದೆಲ್ಲವೂ ಇಂದಿಗೂ ಆಕೆಯ ನೆನಪಿನಲ್ಲಿ ಇತಿಹಾಸವು ಅನುಭವವಾಗಿಯೇ ತೋರುತ್ತದೆ.

## ಜೈನ ಧರ್ಮದ ಸ್ಥಿತಿಗತಿ

ಈ ಶಾಸನದಿಂದ ಲಕ್ಕುಂಡಿಯು ಉತ್ತರ ಕರ್ನಾಟಕದ ಒಂದು ಪ್ರಮುಖ ಜೈನಕೇಂದ್ರ ವಾಗಿತ್ತೆಂದು ವಿದಿತವಾಗುತ್ತದೆ. ಇಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಬ್ರಹ್ಮಜಿನಾಲಯವು ಇಂದಿಗೂ ಇದೆ. ಇದರಿಂದಾಗಿ ಆಕೆ ಎತ್ತಿಸಿದ ೧೫೦೧ ಬಸದಿಗಳು ಇದೇ ಭಾಗದಲ್ಲಿ ಬೆಳಕು ಕಂಡಿರಬೇಕು. ಏಕೆಂದರೆ ಆಕೆಗೆ ಇರುವ ಬಿರುದುಗಳಲ್ಲಿ 'ಜಿನಧರ್ಮ ಪತಾಕೆ' ಎಂಬುದು ಬಹು ಮಹತ್ತ್ವವಾದದ್ದು. ಅಂತೆಯೇ ವಿಶ್ವದ ಬದುಕಿಗೆ ಈಕೆ ಜೈನಧರ್ಮದ ಅತ್ಯಂತ ಮಹತ್ತ್ವದ ಕೊಡುಗೆಯೂ ಕೂಡ.

ಈಕೆ ಕಟ್ಟಿಸಿದ ಬಸದಿಗಳಲ್ಲಿ ಈಗಲೂ ಲಕ್ಕುಂಡಿಯಲ್ಲಿ ಎಲ್ಲರ ಕಣ್ಣುಗಳನ್ನು ಸೆಳೆಯುತ್ತಿದೆಯಲ್ಲ, ಆ ಬಗ್ಗೆ ಒಂದೆರಡು ವಿಚಾರಗಳನ್ನು ಈ ಶಾಸನದಿಂದ ಊಹಿಸಲು ಸಾಧ್ಯವಿದೆ. ಈ ಬಸದಿಯು ಆದಿತೀರ್ಥಂಕರನಾದ ಆದಿನಾಥನದೇ ಆಗಿದೆ. ಈ ಬಸದಿ ಕುಸಿದಾಗ ಭರತಾರ್ಯನು ಜೀರ್ಣೋದ್ಧಾರ ಮಾಡಿದನು. ಅನಂತರ ಅದು ಸುಟ್ಟುಹೋಯಿತು. ಆಗ ಸಿರಾಳಸೆಟ್ಟಿ ಜೀರ್ಣೋದ್ಧಾರ ಮಾಡಿದನು. ಆತನ ಮಗ ಬಾಹುಬಲಿ ಇದನ್ನೆಲ್ಲ ಶಾಸನದಲ್ಲಿ ಬರೆದನು. ಈ ಎಲ್ಲ ವಿಚಾರಗಳ ಬಗ್ಗೆ ನಿಖರವಾದ ಸಂಶೋಧನೆ ಅಗತ್ಯ. ಈಗ ನಡೆದಿರುವ ವಿಚಾರಗಳು ಸಾಲವು.

## ಸಾಂಸ್ಕೃತಿಕ ಸಂಗತಿಗಳು

ಈ ಶಾಸನವು ಹುಟ್ಟಿದ ಪರಿಸರದಲ್ಲಿ ಜಾನಪದೀಯ ಅಂಶಗಳ ಜಾಡಿನಲ್ಲಿ ಅನೇಕ ಪ್ರಾದೇಶಿಕ ವಿಚಾರಗಳು ಪಾರಿಭಾಷಿಕ ಶಬ್ದಗಳಾಗಿ ಇತಿಹಾಸ ನಿರ್ಮಿಸುತ್ತದೆ. ಅಂತಹವುಗಳಲ್ಲಿ 'ಪಗರಣ' ಎಂಬ ಶಬ್ದ. ಇದು ಪ್ರಕರಣದಿಂದ ತದ್ಭವವಾದದ್ದು. ಘಟನೆಗಳನ್ನು ಚಿತ್ರಿಸುವಂತಹದ್ದು. ಈ ಪದ ಬಳಕೆಯು ಕವಿರಾಜಮಾರ್ಗದಲ್ಲಿಯೂ ವಡ್ಡಾರಾಧನೆಯಲ್ಲಿಯೂ ಆಗಿದೆ. ಇದನ್ನು ನಾಡಾಡಿಗಳ ನಾಟಕವೆಂಬಂತೆ ಶೋಧನೆಯಿಂದ ಅರ್ಥವು ಒದಗಿಬರುತ್ತದೆ. ಕಾರಹುಣ್ಣಿಮೆ, ಬಾದುಬ್ಬೆ ಮುಂತಾದ ಹಬ್ಬಗಳಲ್ಲಿ ವೇಷ ಹಾಕಿಕೊಂಡು ಜನರನ್ನು ವಿನೋದಗೊಳಿಸುವ ಒಂದು ಮೋಜಿನ ಆಟವೆಂಬ ಅರ್ಥವು ಪ್ರತೀತಿಯಾದದ್ದು. ಆ ಹಾಸ್ಯದಲ್ಲಿ ಮನರಂಜನೆಯಲ್ಲಿ ಆ ಕಾಲದ ಜನಪದರ ಬದುಕು ಅಲ್ಲಿ ಪ್ರತಿಬಿಂಬಿಸುತ್ತದೆ. ಆ ಪ್ರತಿಬಿಂಬದಲ್ಲಿ ಸಾಂಸ್ಕೃತಿಕ ಸ್ವಭಾವವು ದಟ್ಟವಾಗಿ ಒಳಧ್ವನಿಯಾಗಿ ನೋಡುಗರನ್ನು ಸೆಳೆಯುತ್ತದೆ. ಈ ಆಟದಲ್ಲಿ ವಿಶೇಷತಃ ಪುರುಷರೆ ಸಿಂಹ, ಹುಲಿ, ರಾಜ ಹೀಗೆಲ್ಲ ವೇಷತೊಟ್ಟು ಬೀದಿಯಲ್ಲಿ ಕುಣಿಯುವಾಗ ಇದೆಲ್ಲ ಬದುಕಿನ ಪ್ರತಿಬಿಂಬವಾಗಿ ಆತ್ಮಪರಿಶೀಲನೆಯಲ್ಲಿ ನೋಡುಗ ಸ್ವಾನಂದಿಯಾಗುತ್ತಾನೆ. ಈ ಪಗರಣಗಳು ಇಂದಿಗೂ ಪರಂಪರೆಯಾಗಿ ಜಾತ್ರೆಗಳಲ್ಲಿ ನಡೆಯುತ್ತವೆ. ಇದೇ ಮೂಲದಿಂದ ಬೀದಿನಾಟಕಗಳೂ ಸೃಷ್ಟಿಯಾಗಿರಲಿಕ್ಕೆ ಸಾಕು.

ಹಬ್ಬಗಳು ಕೂಡ ಸಾಂಸ್ಕೃತಿಕವಾಗಿರುವ ಶ್ರೀಮಂತವಾದ ಪರಂಪರೆಯನ್ನೇ ಬಿಂಬಿಸುತ್ತ ಬಂದಿವೆ. ಅಂತಹ ಹಬ್ಬಗಳ ಜೊತೆ ಪ್ರಧಾನ ದೇವತೆಯ ಹೆಸರು ಜೋಡಿಯಾಗಿ, ಕೊನೆಗೆ ಒಂದೇ ಎಂಬಂತೆ ಪದಸೃಷ್ಟಿಯಾಗಿ ಜನಪದದಲ್ಲಿ ಹಾಸುಹೊಕ್ಕಾಗಿಬಿಡುತ್ತದೆ. ಭದ್ರಾಂಬಾ, ಬಾದುಬ್ಬೆ ಈ ಹೆಸರುಗಳು ದುರ್ಗಿಗೆ ಸಂಬಂಧಪಟ್ಟವು. ಬನಶಂಕರಿಯೂ ಅಂತಹ ಒಂದು ಅವತಾರ ಹೀಗಾಗಿ, ಬನದಬ್ಬೆ, ಬಾದುಬ್ಬೆ ಪರ್ವವಾಗಿ ಶಾಸನದಲ್ಲಿ ಉಲ್ಲೇಖಿತವಾಗಿರುವುದನ್ನು ಗಮನಿಸಿದರೆ ಲಕ್ಕುಂಡಿಯು ಬಾದಾಮಿಗೆ ಸಮೀಪವಿರುವುದರಿಂದ ಬನಶಂಕರಿ ಪದ ಬನದಬ್ಬೆಯಾಗಿದೆಂಬುದಕ್ಕೆ ಒತ್ತು ನೀಡುತ್ತದೆ. ಹೀಗೆ ಶಾಸನಗಳಿಂದ ಇಂತಹ ಪದಗಳನ್ನು ವಿಶ್ಲೇಷಿಸಿದಾಗ ಕನ್ನಡ ಜನಪದ ಸಂಪತ್ತಿಗೆ ವಿಶಿಷ್ಟ ಮೌಲ್ಯ ಬರುತ್ತದೆ. ಆ ದೃಷ್ಟಿಯಿಂದ ಈ ಶಾಸನ, ಕರ್ನಾಟಕ ಶಾಸನ ಸಂಪದದಲ್ಲಿ ಬಹಳ ಮಹತ್ವ ಹೊಂದಿದೆ.

ಇದೇ ರೀತಿ ಈ ಶಾಸನದಲ್ಲಿ 'ಘಟಾಂತಕಿ ಬಸದಿ' ಎಂಬ ಉಲ್ಲೇಖವಿದೆ. ಇದರಿಂದ ಸಂಶೋಧಕರಿಗೆ ಹೊಸ ಹೊಳಹುಗಳನ್ನು ನೀಡುವಲ್ಲಿಯೂ ಈ ಶಾಸನ ಮಹತ್ವವೆನಿಸಿದೆ. ಹಾಗೆಯೆ 'ಮಹಾಜನರನ್ನು ಕುರಿತು ಸಿಂಹ ಪರಾಕ್ರಮರ್ ದುಷ್ಟವಿಧ್ವಂಸಕರ್, ಶಿಷ್ಟ ಜನಾಶ್ರಯರ್ ಎಂಬ ವಿಶೇಷಣದ ಜೊತೆಗೆ ಇವರನ್ನು 'ವೈಷ್ಣವ ರೀತಿ ಮನೋಹರರ್' ಎಂದು ವರ್ಣಿಸಲಾಗಿದೆ. ಇದರಿಂದಾಗಿ ಪರಧರ್ಮ ಸಹಿಷ್ಣೆಯಾದ ಅತ್ತಿಮಬ್ಬೆ ಬದುಕಿನ ಒಟ್ಟು ಸಾಂಸ್ಕೃತಿಕ ಸಂಪದಕ್ಕೆ ಎಲ್ಲ ಒಳಿತುಗಳು ಬೇಕೆಂದು ಭಾವಿಸಿ ಅವರಿಗೆ ವತ್ತಿ ನೀಡಿದ ಉಲ್ಲೇಖವು ಇರುವುದರಿಂದ ಅವಳ ಗುಣಗ್ರಾಹಿತ್ವ ಹಾಗೂ ಸಮಾಜದ ಅಂತಹ ಒಟ್ಟು ಲೇಖಕರಿಗೆ ಅವಳ ಕಾಣ್ಕೆಗಳು ಇಲ್ಲಿ ಬೆಳಕನ್ನು ಬೀರಿವೆ. ಹೀಗಾಗಿ ಅಗ್ರಹಾರದ ಒಡೆಯರೇ

ಆ ಮಹಾಜನರೆಂಬುದನ್ನು ಅತ್ತಿಮಬ್ಬೆಯ ಈ ಸ್ಪಷ್ಟ ಚಿತ್ರಣ ನೀಡಿರುವುದು ಕೂಡ ಆಗಿನ ಸಮಾಜದ ಆಯಕಟ್ಟಿನ ಸುವ್ಯವಸ್ಥೆಯ ಬಗ್ಗೆ ಸಾಕಷ್ಟು ಗುಣ ಗೌರವಗಳನ್ನು ಶ್ರುತಪಡಿಸಿದೆ.

ಆಗಿನ ಕಾಲದಲ್ಲಿದ್ದ ಕೆಲವೊಂದು ರಾಜ ನೀತಿಯಲ್ಲಿಯ ಅರ್ಥವತ್ತಾದ ಸಂಪ್ರದಾಯಗಳ ಬಗ್ಗೆಯೂ ಈ ಶಾಸನವು ಬೆಳಕು ಬೀರಿರುವುದು ಅಚ್ಚರಿಯನ್ನು ಹುಟ್ಟಿಸಿದೆ. “ಬೀಟಿವೃತ್ತಿ” ಹಾಗೂ “ತಳವೃತ್ತಿ”ಗಳ ಬಗ್ಗೆ ಪ್ರಸ್ತಾಪಿಸಿರುವುದು, “ಬೀಟಿವೃತ್ತಿ’ಯೆಂಬುದು ಸಾಮಂತರಾಜನು ತನ್ನ ಒಡೆಯನಿಗೆ ತೋರುತ್ತಿದ್ದ ಗೌರವವೆಂದು ಅರ್ಥ. ಇನ್ನಷ್ಟು ಆಳಕ್ಕೆ ಹೋದರೆ, ಸಾಮಂತರಾಜನು ತನ್ನ ಒಡೆಯನೆಂಬ ಆಲದ ಬಿಳಿಲಾಗಿ ಆಶ್ರಯ ಪಡೆಯುವ ರೀತಿಯೆಂಬುದು ವಿಶೇಷ ಅರ್ಥ. ಹೀಗೆ ಅಂದಿನ ರಾಜನೀತಿಯನ್ನು ಶಾಸನಕಾರನು ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ಮೂಡಿಸುವಾಗ ಮರೆತಿಲ್ಲ. ಆಕೆಯ ವಿರೋದಾತ್ತತೆಯ ಚರಿತ್ರೆಗೆ ಇದು ಕುಂದಣ ಪ್ರಯೋಗದ ಶಬ್ದ. ಇನ್ನು ‘ತಳವೃತ್ತಿ’ ಎಂಬುದು ಸ್ಥಳವೃತ್ತಿಯಿಂದ ಬಂದ ವಿಶೇಷ. ಇದನ್ನು ಪ್ರಸಾರದಲ್ಲಿ ತಳವಿತ್ತಿ, ತಳವಿರ್ತಿ ಎಂದೂ ಜನ ರೂಢಿಗೆ ತಂದರು. ಈ ಪದದ ಒಳಗಿನ ಅರ್ಥವು, ಆಯಾ ದೇವಾಲಯಗಳ ಸಂರಕ್ಷಣೆಗೆ ಬಿಟ್ಟುಕೊಟ್ಟ ದತ್ತಿ. ಹೀಗಾಗಿ ಸಾವಿರದ ಸಾವಿರಾರು ಬಸದಿಗಳನ್ನು ಕಟ್ಟಿಸಿದ ಅತ್ತಿಮಬ್ಬೆ ಅವುಗಳ ಸಂರಕ್ಷಣೆಗಾಗಿ ಇಂತಹ ದತ್ತಿಗಳನ್ನು ನೀಡಿ ಹೆಗ್ಗಳಿಕೆ ಪಡೆದವಳು. ಈ ಬಗ್ಗೆ ಪ್ರಸ್ತಾಪಿಸಿರುವುದರ ಜೊತೆಗೆ ವೈವಿಧ್ಯಮಯವಾದ ತೆರಿಗೆಗಳ ಉಲ್ಲೇಖವೂ ಇರುವುದರಿಂದ ಈ ಶಾಸನವು ಆಗಿನ ಕಾಲದ ಆಡಳಿತದ ವೈಖರಿಯನ್ನು ತಿಳಿದುಕೊಳ್ಳಲು ದಿಕ್ಸೂಚಿ ನಕ್ಷತ್ರವಾಗಿದೆ.

ಲಕ್ಕುಂಡಿ ಶಾಸನವು ಒಂದು ಮಹತ್ವದ ಐತಿಹಾಸಕ ದಾಖಲೆಯನ್ನು ಒದಗಿಸಿರುವ ಸುಂದರ ಕಾವ್ಯ. ಇದರಲ್ಲಿ ಅತ್ತಿಮಬ್ಬೆಯ ಕಾಲದ ಜನಜೀವನದ ಸಮೃದ್ಧಿ, ಸಂತೃಪ್ತಿ ಮತ್ತು ವ್ಯಷ್ಟಿ ಸಮಷ್ಟಿಗೆ ಹೀಗೆ ಸಮರ್ಪಣವಾಗಬೇಕೆಂಬುದರ ಧ್ವನಿ ರಿಂಗಣವಿದೆ. ಹೀಗಾಗಿ ಕನ್ನಡನಾಡಿನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ನೆಲೆಗೆ ಇದೊಂದು ಮೌಲಿಕವಾದ ಶಾಸನ ಕಾವ್ಯ.

❑



# ವಿಧ್ಯರ್ಥ ಪ್ರತಿಷೇಧ ಕ್ರಿಯೆಯ 'ಅಲ್' ಪ್ರತ್ಯಯ

● ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ

'ಅಲ್' ಹಳಗನ್ನಡ ಭಾಷೆಯ ಒಂದು ಪ್ರತ್ಯಯ. ಅದಕ್ಕೆ ಪ್ರಾಚೀನ ವೈಯಾಕರಣರು ಈ ಮೂರು ಪ್ರಯೋಜನಗಳನ್ನು ಗುರುತಿಸಿದ್ದಾರೆ.

೧. ಮಧ್ಯಮಪುರುಷದಲ್ಲಿ ವಿಧ್ಯರ್ಥದ ಪ್ರತಿಷೇಧ ಕ್ರಿಯೆಯನ್ನು ರಚಿಸಲು ಧಾತುವಿಗೆ ಹತ್ತುವ ಪ್ರತ್ಯಯ.

ಉದಾ: ಉಸಿರ್ + ಅಲ್ = ಉಸಿರಲ್ : ಮಾತಾಡಬೇಡ; ಪುಗು + ಅಲ್ = ಪುಗಲ್ : ಪ್ರವೇಶಿಸಬೇಡ.

೨. ಪ್ರಯೋಜನ ವಸ್ತುವಿಗೆ ನಿಮಿತ್ತವಾದ ಕ್ರಿಯೆಯಲ್ಲಿ ಧಾತುವಿಗೆ ಹತ್ತುವ ಪ್ರತ್ಯಯ.

ಉದಾ: 'ಇಜೆಯಲ್ ತಕ್ಕಳವು' : ಇಜೆ + ಅಲ್ = ಇಜೆಲ್ : ಅಳವು ಎಂಬ ವಿಷಯದ ಪ್ರಯೋಜನ ಇರಿಯುವುದು; 'ಈಯಲ್ ತಕ್ಕ ಸಂಪತ್ತಿ'; ಈ + ಅಲ್ = ಈಯಲ್: ಸಂಪತ್ತಿ ಎಂಬ ವಿಷಯದ ಪ್ರಯೋಜನ ಈವುದು.

೩. ಒಂದು ಕ್ರಿಯೆ ಮತ್ತೊಂದು ಕ್ರಿಯೆಗಾಗಿ ನಡೆಯುವಾಗ ಎರಡನೆಯ ಕ್ರಿಯೆಯ ಧಾತುವಿಗೆ ಹತ್ತುವ ಪ್ರತ್ಯಯ.

ಉದಾ: 'ಗೆಲಲ್ ಬಗೆದಂ': ಗೆಲ್+ಅಲ್=ಗೆಲಲ್: ಬಗೆದನು ಎಂಬ ಕ್ರಿಯೆ ಗೆಲ್ಲುವುದು ಎಂಬ ಇನ್ನೊಂದು ಕ್ರಿಯೆಗಾಗಿ ನಡೆಯಿತು; 'ಮುತ್ತಲೇೞ್ದಂ': ಮುತ್ತು+ಅಲ್=ಮುತ್ತಲ್ : ಹೇಳಿದನು ಎಂಬ ಕ್ರಿಯೆ ಮುತ್ತುವುದು ಎಂಬ ಇನ್ನೊಂದು ಕ್ರಿಯೆಗಾಗಿ ನಡೆಯಿತು.

ವೈಯಾಕರಣರು ಗುರುತಿಸದ ಇನ್ನೊಂದು ಪ್ರಯೋಜನವೂ ಉಂಟು, ಅದೆಂದರೆ:

೪. ಧಾತು ಕೃನ್ನಾಮವಾಗಲು ಹತ್ತುವ ಪ್ರತ್ಯಯ

ಉದಾ: ತುಱುಗು+ಅಲ್=ತುಱುಗಲ್ : ಗುಂಪು; ಬೀೞ್+ಅಲ್=ಬೀೞಲ್: (ಮರದ) ಬಿೞಲು.

ಈಗ ಮೊದಲ ಪ್ರಯೋಜನದ ವಿಚಾರ. ಮಧ್ಯಮಪುರುಷದಲ್ಲಿ ವಿಧ್ಯರ್ಥದ ಪ್ರತಿಷೇಧ ಕ್ರಿಯೆಯ ಸ್ವರೂಪವನ್ನು ವಿಶದ ಪಡಿಸುವ ವಿಷಯದಲ್ಲಿ ಹಳಗನ್ನಡ ವ್ಯಾಕರಣಗಳ ಸೂತ್ರ ವೃತ್ತಿ ವ್ಯಾಖ್ಯಾನ ಮತ್ತು ಪ್ರಯೋಗಗಳಿಗೆ ಸಂಬಂಧಿಸಿ ಕೆಲವು ತೊಡಕುಗಳುಂಟು. ಈ ಕಾರಣದಿಂದ ವ್ಯಾಕರಣ ಪಠ್ಯಗಳಲ್ಲಿಯೂ ವ್ಯಾಕರಣಾಂಶಗಳ ವಿಮರ್ಶೆಯಲ್ಲಿಯೂ ಕೆಲಮಟ್ಟಿಗೆ ಗೊಂದಲಗಳಿಗೆ ಅವಕಾಶವಾಗಿದೆ. ಇವನ್ನು ಪರಿಶೀಲಿಸಿ, ಪ್ರಕ್ರಿಯೆಯನ್ನು ಖಚಿತ ಪಡಿಸುವುದು ಈ ಬರೆಹದ ಉದ್ದೇಶವಾಗಿದೆ. ಈ ಪರಿಶೀಲನೆಯ ಆಕರಗಳನ್ನು ಅವುಗಳ ಕರ್ತೃಗಳ ಆನುಪೂರ್ವಿಗೆ ಅನುಸಾರವಾಗಿ ಗಮನಿಸಿದೆ.

**'ಶಬ್ದಸ್ಮೃತಿ' :**

ಪ್ರತಿಷೇಧದೊಳಂ ಕೆಲಬರ
ಮತದಿಂದಲ್ ವರ್ತಿಕುಂ....

ನಗೆಯೊಳಮಪ್ಪೊಡಮಿಂತೀ
ತೆಗಟ ದುರುಕ್ತಿಗಳನೆಮ್ಮೊಳಿಂ ನುಡಿಯಲ್ ನೀಂ
ಬಗೆಯೊಳ್ ಬೇಱೊಂದನಣಂ

ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೇ ॥ (ಸೂ. ೯೪, ಪ್ರ, ೪೧೨)

ಕ್ರಿಯೆ ತಾನು ಕ್ರಿಯಾರ್ಥವನ್ನು ಕೊಡುವಾಗ 'ಅಲ್' ಪ್ರತ್ಯಯ ಬರುತ್ತದೆಯೆಂದು ಹೇಳಿದ (ಸೂ.೯೩) ಮೇಲೆ, ಕೆಲವರ ಅಭಿಪ್ರಾಯದಂತೆ ಈ 'ಅಲ್' ಪ್ರತ್ಯಯ ಪ್ರತಿಷೇಧದಲ್ಲಿಯೂ ವರ್ತಿಸುತ್ತದೆಯೆಂದು ಮುಂದಿನ ಸೂತ್ರದಲ್ಲಿ (ಸೂ. ೯೪) ಹೇಳಿದೆ.

'ಕೆಲವರ ಅಭಿಪ್ರಾಯ' ಎಂದು ಏಕೆ? ಪ್ರತಿಷೇಧ ಇತರ ರೀತಿಗಳಲ್ಲಿಯೂ ಶಕ್ಯ ಎಂದಿರಬಹುದು; ಈ ಅರ್ಥದಲ್ಲಿ ಈ ಪ್ರತ್ಯಯಕ್ಕೆ ವ್ಯಾಪ್ತಿ ಕಡಿಮೆ ಎಂದೂ ಇರಬಹುದು. ಉದ್ಧೃತ ಪ್ರಯೋಗದ ಆಕರ ತಿಳಿಯದು. ಇದೇ ಭಾಗಶಃ 'ಶಬ್ದಮಣಿದರ್ಪಣ'ದಲ್ಲಿ ಸಹ ಬಂದಿದೆ (೨೪೫–೧)

ಇಲ್ಲಿ 'ನುಡಿಯಲ್', 'ಬಗೆಯಲ್' ಮ.ಪು.ಏ.ವ ವಿಧ್ಯರ್ಥದ ಪ್ರತಿಷೇಧ ಕ್ರಿಯೆಗಳೆನ್ನುವುದು ವಿದಿತ. ನುಡಿ+ಅಲ್=ನುಡಿಯಲ್ : ನುಡಿಯದಿರು/ನುಡಿಯಬೇಡ, ಬಗೆ+ಅಲ್=ಬಗೆಯದಿರು/ಬಗೆಯಬೇಡ. ಇವು ಇಲ್ಲಿಯ ಅರ್ಥಗಳು. ನಾಗವರ್ಮ ಏ.ವ.ದ ಪ್ರಯೋಗಗಳನ್ನು ಮಾತ್ರ ಉದ್ಧರಿಸಿದ್ದಾನೆ; ಬ.ವ.ದ ಪ್ರಯೋಗಗಳನ್ನು ಸಹ ಉದ್ಧರಿಸಿದ್ದರೆ ಚೆನ್ನಾಗಿತ್ತು: ಮುಂದೆ ಭಾಷಾಭೂಷಣದಲ್ಲಿ ಕೂಡ ಹೀಗಿಯೇ ಆಗಿದೆ.

'ಭಾಷಾಭೂಷಣ':

ಪ್ರತಿರೋಧೇ ಚ॥
ಪ್ರತಿಷೇಧಾರ್ಥೇऽಪಿ ಧಾತೋಃ ಅಲ್ ಭವತಿ॥

ನುಡಿಯಲ್ ಬೇಡ, ಮಿಡುಕಲ್ ಬೇಡ, ಪೋಗಲ್ ಬಾರದು, ಉಸಿರಲ್ ಬಾರದು.

ಇಲ್ಲಿ ಕೂಡ "ಕ್ರಿಯಾಯಾಂ ಕ್ರಿಯಾರ್ಥಾಯಾಮಲ್" ಎಂಬ ಸೂತ್ರವೂ (೨೨೧) "ಕ್ರಿಯಾಯಾಂ ಕ್ರಿಯಾರ್ಥಾಯಾಂ ಧಾತೋಃ ಅಲ್ ಭವತಿ" ಎಂಬ ವೃತ್ತಿಯೂ ಇವುಗಳ ಆಶಯಕ್ಕೆ ಅನುಗುಣವಾಗಿ 'ನೋಡಲ್ ಬಗೆದಂ', 'ಕೂಡಲ್ ಸಾರ್ದಂ' 'ಪಾಡಲ್ ತೊಡಗಿದಂ' ಇ. ಉದಾಹರಣೆಗಳೂ ಮುಗಿದ ಬಳಿಗ, ಈ 'ಅಲ್' ಪ್ರತ್ಯಯ 'ಪ್ರತಿಷೇಧದಲ್ಲಿಯೂ' ಎಂಬುದಾಗಿ ಹೇಳಿದೆ (ಸೂ.೨೨೨).

ಆಶಯದ ಮಟ್ಟಿಗೆ ಶಬ್ದಸ್ಮೃ ಭೂಷಣಗಳಲ್ಲಿ ಸಾಮ್ಯವುಂಟು, ಆದರೆ ಪ್ರಯೋಗ ಭಾಗದಲ್ಲಿ ವ್ಯತ್ಯಾಸವಿದೆ. ಈ ವ್ಯತ್ಯಾಸಕ್ಕೆ ನಾಗವರ್ಮನ ಗ್ರಹಿಕೆ ಖಂಡಿತವಾಗಿ ಕಾರಣವಿರಲಾರದು, ಬೇಡ, ಬಾರದು ಇಂಥ ಅನ್ಯ ಪ್ರತಿಷೇಧಾರ್ಥಕ ಶಬ್ದಗಳು ಇಂಥ ಸನ್ನಿವೇಶದಲ್ಲಿ ಮುಂದೆ ಇದ್ದರೆ, ಆಗ ಹಿಂದೆ ಬರುವ 'ಅಲ್' ಕ್ರಿಯಾರ್ಥಕ ಪ್ರತ್ಯಯವಾಗಿಯೇ ವರ್ತಿಸುವುದಲ್ಲದೆ, ಪ್ರತಿಷೇಧಾರ್ಥಕವಾಗಿ ಅಲ್ಲ. ಆದ್ದರಿಂದ ಇಲ್ಲಿ ಉಲ್ಲೇಖಗಳು ಈಗ ಕಾಣಿಸಿರುವಂತೆ ಅಲ್ಲದೆ, ನುಡಿಯಲ್, ಮಿಡಕಲ್, ಪೋಗಲ್, ಉಸಿರಲ್ ಎಂದಷ್ಟೇ ಇರಬೇಕು; 'ಬೇಡ'; 'ಬಾರದು' ಎಂಬ ಪ್ರತಿಷೇಧವಾಚಕಗಳು ಅವುಗಳಿಗೆ ಸೇರುವುದು ಸರಿಯಲ್ಲ. ಹಸ್ತಪ್ರತಿಗಳಲ್ಲಿ ಹೊಕ್ಕಿರುವ ಪ್ರಮಾದಗಳು ಅವು.

'ಶಬ್ದಮಣಿ ದರ್ಪಣ' :

ಸತತಂ ಮಧ್ಯಮಪುರುಷ
ಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾ
ಶ್ರಿತ ಹೇತು ಕ್ರಿಯೆಯೊಳಮ
ನ್ವಿತಮಲ್ ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆಗಳೊಳಂ॥

ಮಧ್ಯಮಪುರುಷ ಪ್ರತಿಷೇಧದ ಕ್ರಿಯೆ ವಿಧ್ಯರ್ಥಮಾಗೆ ಅಲ್ ಬರ್ಕುಂ...

ವಿಧ್ಯರ್ಥಮಾದಲ್ಲಿ:

ಉಸಿರಲಿಂ, ಮೀಱಲಿಂ ಸಾರಲಿಂ
ಆರಯ್ದಾರುಂ ಸಾರಲಿಂ....(೧)
ಬಿಲ್ಲೆಱಿಯನೆಂದುದೆ ಮಾತು ಮೀಱಲಿಂ (೨)
ಏಳಿದಂಗೆಯಲಿಮೀಗಳೆ ನಮ್ಮೊ
ಳ್ಳಾಳನ್ ....................(೩)
ವಿಧ್ಯರ್ಥವಲ್ಲದ ಪ್ರತಿಷೇಧದ ಕ್ರಿಯೆಯೊಳ್ ಅಲ್ ಅಕ್ಕು:
.......ಪೆಱತೊಂದನಣಂ
ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೆ(೪)
ಬನದೊಳ್ ಪುಗಲ್ ಪುಗಲೆಂಬ ಗಂಡುಗೋಗಿಲೆ........(೫)

ಇಲ್ಲಿ ಉದ್ಧೃತ ಸೂ.೨೪೫ರ ಸೂತ್ರದ ವೃತ್ತಿ ಮತ್ತು ಪ್ರಯೋಗ ಭಾಗಗಳ ಸಂಬಂಧದಲ್ಲಿ ಪರಿಷ್ಕರಣಗಳ ನಡುವೆ ವ್ಯತ್ಯಾಸಗಳಿವೆ, ಅಭಿಪ್ರಾಯ ವಿಶದತೆ ಸುಗಮವಲ್ಲದ ಗೊಂದಲಗಳಿವೆ. ವಿಚಾರಕ್ಕೆ ವಿಷಯವಾಗಿ ಮೇಲೆ ಉದ್ಧರಿಸಿರುವುದು ಡಿ.ಎಲ್.ನರಸಿಂಹಾಚಾರ್ಯರ ಪರಿಷ್ಕರಣದ (೧೯೬೭ರ ಮೂರನೆಯ ಮುದ್ರಣ) ಭಾಗವನ್ನು. "ಮಧ್ಯಮಪುರುಷ ಪ್ರತಿಷೇಧದ ಕ್ರಿಯೆ ವಿಧ್ಯರ್ಥಮಾದಲ್ಲಿಯುಂ....ಅಲ್ ಅಕ್ಕುಂ" (ಕಿಟ್ಟೆಲ್), ಮಧ್ಯಮಪುರುಷ ಪ್ರತಿಷೇಧದ ಕ್ರಿಯೆಯುಂ ವಿಧ್ಯರ್ಥಮಾಗೆ ಅಲ್ ಅಕ್ಕುಂ" (ಎಲ್.ಬಸವರಾಜು). ಈ ಭಿನ್ನಪಾಠದ ವೃತ್ತಿಯಿಂದ ಅಂತಹ ಆಶಯಭೇದವೇನೂ ಇಲ್ಲದಿದ್ದರೂ (ಎಲ್.ಬಿ.ಪರಿಷ್ಕರಣದಲ್ಲಿ 'ಕ್ರಿಯೆಯುಂ' ಎಂಬಲ್ಲಿ ಸಮುಚ್ಚಯಕ್ಕೆ ಸಾರ್ಥಕತೆಯಿಲ್ಲ; 'ಕ್ರಿಯೆಯಾ' ಎಂದಾದರೆ ಆಗಬಹುದು), ಪ್ರಯೋಗ ಭಾಗದಲ್ಲಿ ಗೊಂದಲವುಂಟು.

ಪ್ರಯೋಗ ಭಾಗದಲ್ಲಿ ವಿಧ್ಯರ್ಥದ ಪ್ರತಿಷೇಧ ಕ್ರಿಯೆ ಬೇರೆ, ವಿಧ್ಯರ್ಥವಲ್ಲದ ಪ್ರತಿಷೇಧ ಕ್ರಿಯೆ ಬೇರೆ ಎಂದು ಅಭಿಪ್ರಾಯವಾಗುವಂತೆ ಸೂಚನೆಯೂ ಉದಾಹರಣೆಗಳೂ ಇರುವುದು ಆ ಗೊಂದಲಕ್ಕೆ ಕಾರಣವಾಗಿದೆ. 'ವಿಧ್ಯರ್ಥಮಾದಲ್ಲಿ' ಎಂದಿರುವುದಕ್ಕೆ ಕೊಟ್ಟ ಉದಾಹರಣೆಗಳಲ್ಲಿ ಪ್ರತಿಷೇಧವೂ 'ವಿಧ್ಯರ್ಥಮಲ್ಲದ ಪ್ರತಿಷೇಧ ಕ್ರಿಯೆಯೊಳ್' ಎಂದಿರುವುದಕ್ಕೆ ಕೊಟ್ಟ ಉದಾಹರಣೆಗಳಲ್ಲಿ ವಿಧ್ಯರ್ಥವೂ ಸ್ಪಷ್ಟವಾಗಿ ತೋರುತ್ತಿದ್ದು, ಇವುಗಳ ಅನ್ವಯ ಹೇಗೆ ಎಂದು ತಿಳಿಯುವುದೇ ಕಷ್ಟವಾಗುತ್ತಿದೆ. ಸೂತ್ರ ವೃತ್ತಿಗಳಲ್ಲಿ ಮ.ಪು. ಪ್ರತಿಷೇಧ ಕ್ರಿಯೆಯನ್ನೂ ವಿಧ್ಯರ್ಥವನ್ನೂ ಹೀಗೆ ಬೇರ್ಪಡಿಸಿಲ್ಲ. ಆದ್ದರಿಂದ ಮ.ಪು.ವಿಧ್ಯರ್ಥ–ಪ್ರತಿಷೇಧ ಕ್ರಿಯೆ ಈ ಮೂರನ್ನು ಒಗ್ಗೂಡಿಸಿಯೇ ಉದಾಹರಣೆಗಳನ್ನು ಕೇಶಿರಾಜನು ಉದ್ಧರಿಸಿರುವುದು ಶಕ್ಯ.

ಉದಾಹರಣೆಗಳನ್ನು ವಿಶ್ಲೇಷಿಸಿದರೆ, ಉಸಿರ್+ಅಲ್+ಇಮ್=ಉಸಿರಲಿಂ: (ನೀವು) ಉಸಿರದಿರಿ/ಉಸಿರಬೇಡಿ, ಮೀಱು+ಅಲ್+ಇಮ್=ಮೀಱಲಿಂ : (ನೀವು) ಮೀರದಿರಿ/ಮೀರಬೇಡಿ, ಸಾರ್+ಅಲ್+ಇಮ್=ಸಾರಲಿಂ;, (ನೀವು) ಸಮೀಪಿಸದಿರಿ/ಸಮೀಪಿಸಬೇಡಿ ಎಂದು ಮುಂತಾಗಿ ಶಬ್ದರಚನೆಯೂ (ಧಾತು+ಮ.ಪು ವಿಧ್ಯರ್ಥದ ಪ್ರತಿಷೇಧ ಕ್ರಿಯೆ+ಮ.ಪು.ಬ.ವ ಆಖ್ಯಾತ ಪ್ರತ್ಯಯ), ಬಗೆ+ಅಲ್=ಬಗೆಯಲ್: (ನೀನು) ಬಗೆಯದಿರು/ಬಗೆಯಬೇಡ, ಪುಗು+ಅಲ್+ಪುಗಲ್ : (ನೀನು) ಪ್ರವೇಶಿಸದಿರು/ಪ್ರವೇಶಿಸಬೇಡ ಎಂದು ಶಬ್ದರಚನೆಯೂ (ಧಾತು+ಮ.ಪು ವಿಧ್ಯರ್ಥದ ಪ್ರತಿಷೇಧ ಕ್ರಿಯೆ; ಹೀಗಿದ್ದಾಗ ಏ.ವ.ವಿವಕ್ಷೆ) ಕಂಡುಬರುವುದು ವಿದಿತ.

ಈ ವಿಷಯವನ್ನು ಈಗಾಗಲೇ ಶಬ್ದಸ್ಮೃತಿ ಭಾಷಾಭೂಷಣಗಳ ಉದಾಹರಣೆಗಳಿಂದ ತಿಳಿಯಲಾಗಿದೆ. ಕಾವ್ಯಸ್ಥವಾದ ಉದಾಹರಣೆಗಳಿಂದಲೂ ಇದನ್ನು ಕಂಡುಕೊಳ್ಳಬಹುದು. ಉದಾ:

**'ಪಂಪಭಾರತ'ದಿಂದ:**

೧. ಬೇಱೆರಥಮಂ ಬಂದೇಱಿ ಪೋ ಪುಗಲೆಂ/ದೊದಱುತ್ತುಂ..... (೧೧–೧೧)

೨. ಅಱಿಯರ್ ಪಾಂಡವರೆನ್ನನಿನ್ನುಮಱಿಪಲ್ ನೀಮೆಂದದಂ..... (೧೨–೧೯೮)

೩. ಪಾಡಿದುದು ಮದಾಳಿಮಾಲೆ **ಪುಗಲೆನ್ನದೆ** ದಲ್ ಪುಗಿಮೆಂದು.... (೧೪-೧೨)

೪. ಕಾಗೆವೊಲಿಂತು ಬಲ್ಗೆ ಕರಮಂಜುವಿರಂಜಲಿಂ (೧೦-೧೨೨)

೫. ನಂಬಿಂ **ನಂಬಲಿಮಿಂದಿಂ** / ಗೊಂಬತ್ತು ದಿನಂದಲೆಮ್ಮ ಬೆನ್ನಲೆ ನಿಂದಿರ್ (೧೧-೨೯)

೬. ಪಲ್ಮೊಳೆದಪನಿಲ್ಲಿ ಮನ್ಮಥನಿದಂ **ಪುಗಲಿಂ** ಗಡಿಮೆಂದು (೨-೧೩)

**'ಶಾಂತಿ ಪುರಾಣ'ದಿಂದ:**

ಇಳಿಸಲಿಳಿಸಲ್ ಮಾರ್ಕೊಳ್ ಮಾರ್ಕೊಳ್ **ಪುಗಲ್ ಪುಗಲೆಂದು** ಸಂಗಳಿಸಿ (೪-೨೪)

**'ಲೀಲಾವತೀ ಪ್ರಬಂಧ'ದಿಂದ:**

ನೀನಾರ್ಗದಾನಾರ್ಗೆ **ಬಾರಲ್**... (೧೪-೮೭)

'ಶಬ್ದಮಣಿದರ್ಪಣ'ದಲ್ಲಿ ಕೇಶಿರಾಜನು ಏ.ವ.ದ (-ಅಲ್) ಹಾಗೂ ಬ.ವ.ದ (ಅಲ್+ಇಂ=ಅಲಿಂ) ಉದಾಹರಣೆಗಳನ್ನು ಕ್ರಮವಾಗಿ ತೋರಿಸಿದ್ದು ಕಾಲಾನಂತರದ ಮಾತೃಕೆಗಳಲ್ಲಿ ಅವು ಬೆರೆತು ಹೋಗಿ, ಭಿನ್ನ ಸೂಚಕಾಂಶಗಳು ಹುಟ್ಟಿ ಗೊಂದಲ ಹೆಚ್ಚಿರುವಂತಿದೆ. ಈ ಸಂಬಂಧದಲ್ಲಿ ತೆಕ್ಕುಂಜ ಗೋಪಾಲಕೃಷ್ಣ ಭಟ್ಟರು ತಮ್ಮ ವಿಸ್ತೃತ 'ಕೇಶಿರಾಜದರ್ಪಣ'ದಲ್ಲಿ (೧೯೯೯, ಪು. ೫೧೪-೧೫) ಹೀಗೆ ಅಭಿಪ್ರಾಯ ಪಟ್ಟಿದ್ದಾರೆ:

"ಬಗೆಯಲ್, ಪುಗಲ್ ಎಂಬೆರಡು ಕ್ರಿಯಾಪದಗಳು ಪ್ರತಿಷೇಧ ಕ್ರಿಯಾಪದಗಳು; ಆದರೆ ವಿಧ್ಯರ್ಥಕಗಳಲ್ಲ. ಹೊಸಗನ್ನಡದಲ್ಲಿ ಈ ವ್ಯತ್ಯಾಸವನ್ನು ಸುಲಭವಾಗಿ ಅರ್ಥಮಾಡುವಂತಿದೆ.]

ಅಣಂ ಬಗೆಯಲ್ = ಸ್ವಲ್ಪವೂ ಬಗೆಯಬಾರದು.
ಪುಗಲ್ = ಹೊಗಬಾರದು.

ಬಗೆಯಲಿಂ ಪುಗಲಿಂ ಎಂದಿದ್ದರೆ ಹೊಸಗನ್ನಡದಲ್ಲಿ ಬಗೆಯಬೇಡಿರಿ, ಹೊಗಬೇಡಿರಿ ಎಂಬರ್ಥವಾಗುತ್ತದೆ. ಬಗೆಯಲ್ ಪುಗಲ್ ಎಂಬವುಗಳು ಏಕವಚನಕ್ಕೂ ಬಹುವಚನಕ್ಕೂ ಏಕರೀತಿಯಲ್ಲಿರುತ್ತವೆ. ಮಾತ್ರವಲ್ಲ, ಮೂರು ಪುರುಷಗಳಿಗೆ ಇದು ಒಂದೇ ಸ್ವರೂಪದಲ್ಲಿರುತ್ತದೆ. ಬಗೆಯಲಿಂ ಮುಂತಾದುವು ಮಧ್ಯಮಪುರುಷ ಬಹುವಚನಕ್ಕೆ ಸೀಮಿತವಾಗಿರುತ್ತವೆ ಎಂಬುದನ್ನು ಗಮನಿಸಬೇಕು."

ಭಟ್ಟರು ತಮ್ಮ ಗ್ರಹಿಕೆಗಳಿಗೆ ತಕ್ಕ ಉದಾಹರಣೆಗಳನ್ನು ಕಾವ್ಯಗಳಿಂದೆತ್ತಿ ತೋರಿಸಿಲ್ಲ.

ಇದು ವಿಚಾರಣೀಯ. ಅವರು ಭಾವಿಸುವಂತೆ ಬಗೆಯಲ್, ಪುಗಲ್ ಶಬ್ದಗಳ ಆಶಯ ಬಗೆಯಬಾರದು, ಹೊಗಬಾರದು ಎಂಬಂತೆ ಇದುವುದಾದರೆ ಇವು ಗೆಲಲ್ ಬಗೆದಂ, ಪುಗಲ್ಬಂದಂ ಎಂಬ ಇಲ್ಲವೆ ಉಡವೇಟ್, ಬರವೇಟ್ ಎಂಬ ರೀತಿಯ ಕ್ರಿಯಾರ್ಥದ ಅಲ್/ಅ ಪ್ರತ್ಯಯದ ಕಾರ್ಯಕ್ಕೆ (ಕ್ರಿಯೆ ತಾಂ ಕ್ರಿಯಾರ್ಥಮಂ ಪೇಟ್ವೆ ಡೆಯೊಳಮಲ್ ಅಕ್ಕುಂ) ಸೇರಿದ ರೂಪಗಳೆಂದು ಹೇಳಬೇಕಾಗುತ್ತದೆ. ಇಲ್ಲಿ ಕಾಣುವುದು ಬಗೆ ಮತ್ತು ಬರು, ಹೊಗು ಮತ್ತು ಬರು ಈ ತೆರನ ಎರಡು ಕ್ರಿಯಾಗಳ ಸಂಯುಕ್ತ ರಚನೆ. ಆದರೆ ಬಗೆಯಲ್, ಪುಗಲ್

ಎಂಬಲ್ಲಿ ಕಾಣುವುದು ಬಗೆ, ಪುಗು ಎಂಬ ಧಾತುಗಳಿಗೆ 'ಅಲ್' ಪ್ರತ್ಯಯ ಸೇರಿರುವ ರೂಪಗಳಷ್ಟೇ.

ಅಲ್ಲದೆ ನಾನ್/ನಾಮ್ ಬಗೆಯಲ್, ಅವನ್/ಅವಳ್/ಅವರ್/ ಬಗೆಯಲ್, ಅದು/ಅವು ಬಗೆಯಲ್ ಎಂಬಂತಹ ನಡೆಯ ಪ್ರಯೋಗಗಳು ಹಳಗನ್ನಡ ಭಾಷಾರೂಢಿಯಲ್ಲಿ ಕಂಡುಬಂದಿಲ್ಲ. ಭಟ್ಟರೂ ಅಂಥವನ್ನು ಉದಾಹರಿಸಿಲ್ಲ.

ತಾತ್ಪರ್ಯವೆಂದರೆ: ಧಾತು+ಅಲ್ ಸಂಯೋಜನೆಯ ಬಗೆಯಲ್, ಪುಗಲ್ ಇಂಥ ಕ್ರಿಯಾಪದಗಳು ಮ.ಪು. ಏ.ವ ವಿಧ್ಯರ್ಥದ ಪ್ರತಿಷೇಧಾರ್ಥಕ ಕ್ರಿಯಾರೂಪಗಳು; ಧಾತು+ಅಲ್+ಇಮ್ ಸಂಯೋಜನೆಯ ಉಸಿರಲಿಂ, ಮೀಱಲಿಂ ಇಂಥ ಕ್ರಿಯಾಪದಗಳು ಮ.ಪು. ಬ.ವ ವಿಧ್ಯರ್ಥದ ಪ್ರತಿಷೇಧಾರ್ಥಕ ಕ್ರಿಯಾರೂಪಗಳು. ಇವು ಅನ್ಯಥಾ ಇರುವುದು ಸಾಧ್ಯವಿಲ್ಲ (ಪಂಪಭಾರತದ ೧೨-೧೯ಲರ ಉದಾ. ಒಂದು ಅಪವಾದ; ವಿಶೇಷ ವಾಕ್ಯಭಣಿತಿ)

**'ಶಬ್ದಾನುಶಾಸನ'**

ಆಶೀರಾದೌ ಬೇಡಂಬೇಡೌ ಪರತಃ ॥
ತಿಙಃ ಪರತಃ ಬೇಡಂ ಬೇಡ ಇತ್ಯೇತೌ ಶಬ್ದೌ ಪ್ರಯುಜ್ಯೇತೇ
ಆಶೀರಾದ್ಯರ್ಥೇ ಪ್ರತಿಷೇಧ ವಿಷಯೇ
ಮಾಡಲ್ವೇಡಂ, ಮಾಡಲ್ವೇಡ; ನೋಡಲ್ವೇಡಂ, ನೋಡಲ್ವೇಡ;
ಆಶೀರಾದಾವಿತಿ ಕಿಂ? ಮಾಡಂ, ಮಾಡರ್. ಪ್ರತಿಷೇಧ ಇತಿ ಕಿಂ?
ಮಾಟ್ಕೆ, ಮಾಡುಗೆ, ಪರತ ಇತಿ ಪೂರ್ವಂ ಮಾಭೂತ್. (ಸೂ.೫೨೪)

**ವೇಮಃ॥**

ಇಮಃ ಪರತೋ ಬೇಡಂ, ಬೇಡ ಇತ್ಯೇತೌ ವಾ ಪ್ರಯುಜ್ಯೇತೇ ಪ್ರತಿಷೇಧ ವಿಷಯೇ
ಮಾಡಲಿಂಬೇಡಂ, ಮಾಡಲಿಂ; ಕೂಡಲಿಂಬೇಡಂ, ಕೂಡಲಿಂ. ಇದು ಇತಿ ಕಿಂ? ನೀನಿದಂ,
ಮಾಡಲ್ವೇಡಂ, ಮಾಡಲ್ವೇಡ. (ಸೂತ್ರ ೫೨೫)

**ತಸ್ಮಿನ್ನದಲೌ ॥**

ಬೇಡಂ ಬೇಡ ಇತ್ಯನಯೋಃ ಪರಯೋಃ ತಿಙಃ ಅತ್,
ಅಲ್ ಇತ್ಯೇತೌ ಆದೇಶೌ ಭವತಃ
ಮಾಡಬೇಡಂ, ಮಾಡಲ್ವೇಡಂ, ನೋಡಬೇಡಂ, ನೋಡಲ್ವೇಡಂ
ತಸ್ಮಿನ್ನಿತಿ ಕಿಂ? ನೋಡಂ ನೋಡರ್. (ಸೂತ್ರ ೫೨೬)

**ವೇಮಃ ॥**

ಇಮಃ ಅತ್, ಅಲ್ ಇತ್ಯೇತೌ ಆದೇಶೌ ವಾ ಭವತೋ ಬೇಡಂ,
ಬೇಡ ಇತ್ಯನಯೋಃ ಪರತಃ
ನೋಡಬೇಡಂ, ನೋಡಲ್ವೇಡಂ, ನೋಡಲಿಂಬೇಡಂ; ಮಾಡಬೇಡ,
ಮಾಡಲ್ವೇಡ, ಮಾಡಲಿಂಬೇಡ (ಸೂತ್ರ ೫೨೭)

ಅಲ್ ತದಪ್ರಯೋಗೇ ॥

ಇಮಃ ಅಲಿತ್ಯಾದೇಶೋ ವಾ ಭವತಿ ಬೇಡಂ, ಬೇಡ ಇತ್ಯನಯೋಃ
ಅಪ್ರಯೋಗ ವಿಷಯೇ
ನೀಮೀ ಬನಮಂ ಪುಗಲ್, ನೀಮೀ ಮನೆಯಂ ನೋಡಲ್,
ಯತಿಗಳ್ ನೀಮಂಗಜನಾಟಕ್ಕೆ ಸಲ್ಲಲ್ (ಸೂತ್ರ ೫೨೮)

ಪ್ರಾಕ್ಪ್ರಯೋಗೇ ಚಾವಿಕೃತಾತ್ ॥

ಅವಿಕೃತಾತ್ ಇಮಃ ಪ್ರಾಕ್ ಅಲ್ ಭವತಿ ಬೇಡಂ ಬೇಡ
ಇತ್ಯನಯೋಃ ಪ್ರಯೋಗೇ ಪ್ರಯೋಗ ಚ ವಿಷಯೇ
ಪೆಂಡಿರಂ ನಂಬಲಿಂ ಬೇಡಂ, ನಂಬಲಿಂ ಬೇಡ,
ನಂಬಲಿಂ; ಅಕಾರ್ಯಮಂ ಮಾಡಲಿಂ ಬೇಡ, ಮಾಡಲಿಂ ಬೇಡ,
ಮಾಡಲಿಂ, ಅವಿಕೃತಾದಿತಿ ಕಿಂ? ನೋಡಲ್ಬೇಡ,
ನಂಬಲ್ಬೇಡ. ಅತ್ರ ಅಲಃ ಪ್ರಾಕ್ ಅಲ್ ಮಾಭೂತ್ ಪ್ರಾಗಿತಿ
ಪರತೋ ಮಾಭೂತ್ (ಸೂತ್ರ ೫೨೯)

ಈಗ ಸೂತ್ರಾನುಕ್ರಮವಾಗಿ ವಿಷಯ ವಿಮರ್ಶೆಗೆ ತೊಡಗಬಹುದಾಗಿದೆ. ಹೀಗೆ ಮಾಡುವಾಗ ಪೂರ್ವಸೂರಿಗಳ ಪ್ರಕ್ರಿಯಾ ನಿರ್ವಚನದ ಸಂಗತಿಗಳೆಲ್ಲ ಅನುವರ್ತಿಸುತ್ತವೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಸೂತ್ರ ೫೨೪ರಲ್ಲಿ ಮತ್ತು ಅದರ ವೃತ್ತಿಯಲ್ಲಿ ಆಶೀರ್ವಾದ ಮತ್ತು ಇತರ ಕಾರ್ಯಗಳಲ್ಲಿ ಪ್ರತಿಷೇಧಕ್ರಿಯೆಯ ವಿವಕ್ಷೆಯಿದ್ದಾಗ ಧಾತುವಿನ ಮುಂದೆ ಬೇಡಂ, ಬೇಡ ಎಂಬ ಪ್ರತಿಷೇಧಕ್ರಿಯಾ ವಾಚಕಗಳು ಬರುತ್ತವೆ ಎಂದು ಹೇಳಿದೆ ('ಬೇಡಂ' ಎಂಬ ಅನುಸ್ವಾರಘಟಿತ ರೂಪ ಚಿಂತನೀಯ). ಉದಾಹರಣೆಗಳಿಂದ 'ಅಲ್' ಪ್ರತ್ಯಯದ ಅನಂತರದಲ್ಲಿ ಅವು ಬರುವುವೆಂದು ಅಭಿಪ್ರಾಯವಾಗುವುದು.

ಆಶೀರಾದಿ ವಿಷಯಗಳಲ್ಲಿ ಎಂದು ಹೇಳಿರುವುದರಿಂದಾಗಿ ಇಲ್ಲಿರುವುದು ವಿಧ್ಯರ್ಥದ ವಿವಕ್ಷೆಯೆನ್ನುವುದು ಸ್ಪಷ್ಟ. ಸೂತ್ರ ೪೬೫-೬೬ರ ಉದಾಹರಣೆಗಳನ್ನು ನೋಡಿದರೆ ಈ ವಿಧ್ಯರ್ಥ ಪ್ರ.ಪು.ಕ್ಕೆ ಸಹ ಅನ್ವಯಿಸಬಹುದಾಗಿದೆ. ಆದರೆ ಸೂ. ೫೨೪-೨೫ರ ಆಶಯವನ್ನು ಒಟ್ಟಿಗೆ ಗಮನಿಸಿದಾಗ ೫೨೫ರ "ನೀನಿದಂ ಮಾಡಲ್ಬೇಡ" ಎಂಬ ಉದಾಹರಣೆಯನ್ನು ನೋಡಿದಾಗ, ಇಲ್ಲಿಯ ವಿಧ್ಯರ್ಥ ವಿವಕ್ಷೆ ಮ.ಪು.ಕ್ಕೆ ಅನ್ವಯಿಸುವಂಥದು ಎಂದು ಹೇಳ ಬೇಕಾಗುತ್ತದೆ. ಹೀಗಿದ್ದೂ ಸೂತ್ರ ೫೨೪, ೫೨೬ರಲ್ಲಿ ವಿಧ್ಯರ್ಥವಲ್ಲದ ಪ್ರ.ಪು.ದ ಪ್ರತಿಷೇಧಾರ್ಥಕ ಕ್ರಿಯಾಪದಗಳನ್ನು ವಿಸದೃಶರೂಪಗಳಾಗಿ ಉದಾಹರಿಸಿರುವುದರಿಂದ 'ಅಲ್' ಪ್ರತ್ಯಯದ ಪ್ರಯೋಜನವನ್ನು ಮ.ಪು.ವಿಧ್ಯರ್ಥದ ಪ್ರತಿಷೇಧ ಕ್ರಿಯೆಯಷ್ಟಕ್ಕೇ ಸಂಬಂಧಿಸಿದ್ದೆಂದು ಸೂತ್ರಕಾರನು ತಿಳಿದಂತೆ ತೋರುವುದಿಲ್ಲ. ಇದು ವಿಚಾರಣೀಯ.

ಸೂತ್ರ ೫೨೪-೨೫ರ ಮಾಡಲ್ಬೇಡಂ/ಬೇಡ, ೫೨೬-೨೭ರ ಮಾಡಬೇಡ, ನೋಡಬೇಡ (ಮಾಡಲ್>ಮಾಡ, ನೋಡಲ್>ನೋಡ) ಈ ಉದಾಹರಣೆಗಳು ಈಗಾಗಲೇ ಗಮನಿಸಿರುವಂತೆ ಕ್ರಿಯಾರ್ಥದ ಅಲ್ ಪ್ರತ್ಯಯ ಘಟಿತಗಳು. ಮ.ಪು ವಿಧ್ಯರ್ಥ ಪ್ರತಿಷೇಧಕ್ರಿಯಾ ರೂಪದ

ಅಲ್ ಪ್ರತ್ಯಯ ಘಟಿತಗಳಲ್ಲ ಎನ್ನುವುದನ್ನು ಮೊದಲು ಸ್ಪಷ್ಟ ಮಾಡಿಕೊಳ್ಳಬೇಕು. ಹಾಗೆಯೇ ಸೂತ್ರ ೫೨೫ರಲ್ಲಿ ಮಾಡಲಿಂ ಬೇಡ, ಕೂಡಲಿಂ ಬೇಡ ಎಂದಿರುವ ಉದಾಹರಣೆಗಳು ಅವಿದಿತ, ಅಶುದ್ಧ ಕ್ರಿಯಾಪದಗಳು, ಮಾಡಲಿಂ, ಕೂಡಲಿಂ ಎಂಬಂತಹವು ಅಥವಾ ಮಾಡಬೇಡಿಂ, ಕೂಡಬೇಡಿಂ ಮಾತ್ರ ಉಪಾದೇಯಗಳು ಎನ್ನುವುದನ್ನೂ ಸ್ಪಷ್ಟಮಾಡಿಕೊಳ್ಳಬೇಕು. ಭಾಷಾಭೂಷಣದಲ್ಲಿ ಕೂಡ ಇದೇ ಬಗೆಯ, ಪ್ರಮಾದ ಹೊಕ್ಕಿರುವುದನ್ನು (ನುಡಿಯಲ್ ಬೇಡ, ಪೋಗಲ್ ಬಾರದು ಇ.) ಈಗಾಗಲೇ ನೋಡಿದ್ದೇವೆ.

ಸೂತ್ರ ೫೨೮ರಲ್ಲಿ ಬೇಡಂ/ಬೇಡ ಎಂಬ ಪ್ರತಿಷೇಧಕ್ರಿಯಾವಾಚಕಗಳು ಬಳಕೆಯಾಗದಿದ್ದಾಗ, 'ಇಮ್' ವಿಕಲ್ಪವಾಗಿ 'ಅಲ್' ಎಂದಾಗಬಹುದು ಎನ್ನುವುದೂ ಒಂದು ವಿಲಕ್ಷಣವಾದ ಗ್ರಹಿಕೆ; ಉದಾಹರಣೆಗಳೂ ತೃಪ್ತಿಕರವಲ್ಲ. "ನೀಮೀ ಬನಮಂ ಪುಗಲಿಂ" ಎಂಬುದನ್ನು "ನೀಮೀ ಬನಮಂ ಪುಗಲ್" ಎಂದೂ "ನೀಮೀ ಮನೆಯಂ ನೋಡಲಿಂ" ಎಂಬುದನ್ನು "ನೀಮೀ ಮನೆಯಂ ನೋಡಲ್' ಎಂದೂ ಮುಂತಾಗಿ ಹೇಳಬಹುದು ಎಂಬುದು ಇಲ್ಲಿಯ ಆಶಯ. ಆದರೆ ಈ ಬಗೆಯ ವಾಕ್ಯರಚನೆ ಈಗಾಗಲೇ ಗಮನಿಸಿರುವಂತೆ ತೀರ ವಿರಳ ಅಪವಾದ ಹೊರತು ಕಾವ್ಯಸ್ಥ ಪ್ರಯೋಗಗಳಲ್ಲಿ ಕಂಡುಬಂದದ್ದಲ್ಲ. ಅಲ್ ಏ.ವ.ಕರ್ತೃವಿನ, ಅಲಿಂ ಬ.ವ. ಕರ್ತೃವಿನ ವಿವಕ್ಷೆಯಲ್ಲಿ ಬರುವುದೇ ಸಹಜವಾದ ವಾಕ್ಯರಚನೆ.

ಸೂ.೫೨೯ರಲ್ಲಿ ಬೇಡಂ, ಬೇಡ ಬಳಸಿರಲಿ ಇಲ್ಲದಿರಲಿ ಪ್ರತಿಷೇಧಕ್ರಿಯೆ ಬರುವಲ್ಲಿ 'ಇಮ್'ಗೆ ಮೊದಲು ಅಲ್ ಇದ್ದೇ ಇರುತ್ತದೆ ಎಂಬುದಾಗಿ ತಿಳಿಸಿ, "ನಂಬಲಿಂ ಬೇಡಂ/ಬೇಡ, ನಂಬಲಿಂ", "ಮಾಡಲಿಂ ಬೇಡಂ/ಬೇಡ, ಮಾಡಲಿಂ" ಇಂಥ ಉದಾಹರಣೆಗಳನ್ನು ತೋರಿಸಿದೆ. ಇಲ್ಲಿ 'ನಂಬಲಿಂ', 'ಮಾಡಲಿಂ' ಇಂಥ ರಚನೆಯೇ ಸೂಕ್ತವಾದುದು ಎನ್ನುವುದು ಸ್ಪಷ್ಟ. ಬೇಡ ಬಂದಾಗ್ಗೆ ನಂಬಬೇಡ/ನಂಬಬೇಡಿಂ, ಮಾಡಬೇಡ/ಮಾಡಬೇಡಿಂ ಎಂದೋ ಅಲ್ ಬಂದಾಗ್ಗೆ ನಂಬಲ್/ನಂಬಲಿಂ, ಮಾಡಲ್/ಮಾಡಲಿಂ ಎಂದೂ ಇರಬೇಕು ಎನ್ನುವುದೂ ಸ್ಪಷ್ಟ

'ಶಬ್ದಾನುಶಾಸನ'ದ ಸೂತ್ರಾರ್ಥ ವಿಚಾರವನ್ನು ಮಾಡಿರುವ ಈಚಿನ ವ್ಯಾಖ್ಯಾನಕಾರರೂ ವಿಮರ್ಶಕರೂ ನಾಗವರ್ಮ ಕೇಶಿರಾಜರ ಸದೃಶಭಾಗಗಳೊಂದಿಗೆ ತುಲನೆ ಮಾಡಿಯೂ ಸ್ವತಂತ್ರವಾಗಿ ಕಾವ್ಯಪ್ರಯೋಗಗಳನ್ನು ಪರಿಶೀಲಿಸಿಯೂ ವಿಚಾರಮಾಡಿರುವಂತೆ ತೋರದು; ಹೇಗೋ ಸಾಮಂಜಸ್ಯವನ್ನು ಕಾಣಲು ಪ್ರಯತ್ನಿಸಿದ್ದಾರೆ. ತುಲನೆಯಿದ್ದಲ್ಲಿಯೂ ವಿವೇಚನೆ ತೃಪ್ತಿಕರವಾಗಿಲ್ಲ. (ಉದಾ: ಕುಂಡಲಗಿರಿಯಾಚಾರ್ಯರ ಕನ್ನಡ ಟೀಕೆ, ಕೆ. ಕುಶಾಲಪ್ಪ ಗೌಡರ 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ').

ಭಟ್ಟಾಕಳಂಕನ ವಿವೇಚನೆಯ ಪ್ರಮಾದಕ್ಕೆ ಇವು ಬಹುಶಃ ಕಾರಣಗಳು: ೧. 'ಅಲ್' ಪ್ರತ್ಯಯಕ್ಕೆ ಕ್ರಿಯೆ ತಾನು ಕ್ರಿಯಾರ್ಥವನ್ನು ಹೇಳುವ ಒಂದು ಕಾರ್ಯವೂ ವಿಧ್ಯರ್ಥ–ಪ್ರತಿಷೇಧಕ್ರಿಯೆಗಳು ಏಕೀಭವಿಸಿದ ಇನ್ನೊಂದು ಕಾರ್ಯವೂ ಇರುವುದನ್ನು ಖಚಿತವಾಗಿ ಪೃಥಕ್ಕರಿಸದೆ ಎರಡು ಕಾರ್ಯಗಳನ್ನು ಒಟ್ಟಿಗೇ ವಿವೇಚಿಸಿದುದು. ೨. ಮ.ಪು.ವಿಧ್ಯರ್ಥ ಪ್ರತಿಷೇಧ

ಕ್ರಿಯಾಪದ ರಚನೆಯಲ್ಲಿ ಏ.ವ. ಬ.ವ.,ಗಳ ಪ್ರತ್ಯೇಕತೆಯನ್ನು ಸರಿಯಾಗಿ ಗ್ರಹಿಸದೆ ಹೋದುದು. ೩. ಪ್ರಾಚೀನಕಾವ್ಯಗಳಿಂದ ಪ್ರಯೋಗಗಳನ್ನು ಎತ್ತಿಕೊಳ್ಳದೆ ಸ್ವಂತವಾದವನ್ನು ಬರೆದುದು.

ಭಟ್ಟಾಕಳಂಕನು 'ಅಲ್' ಪ್ರತ್ಯಯದ ವಿಧ್ಯರ್ಥೇತರವಾದ ಕಾರ್ಯಗಳನ್ನು ಮುಂದೆ ನಿರೂಪಿಸಿರುವುದರಿಂದ ಅವನಿಗೆ ಆ ಪ್ರಕ್ರಿಯೆಗಳ ಬಗೆಗೆ ಕೂಡ ಲಕ್ಷ್ಯವಿದೆ ಎನ್ನುವುದು ವಿದಿತ. 'ಅಲರ್ಹಾರ್ಥೇ' (ಸೂ.೫೮೫) ಎಂಬುದರ ಕೆಳಗೆ 'ಮಾಡಲ್ ದಕ್ಷಂ', 'ನೋಡಲ್ ಸಮರ್ಥಂ' ಮುಂತಾಗಿ ಉದಾಹರಣೆಗಳನ್ನು, "ಕ್ರಿಯಾಯಾಂ ಕ್ರಿಯಾರ್ಥಾಯಾಂ" (ಸೂ.೫೮೬) ಎಂಬುದರ ಕೆಳಗೆ ಉಣಲ್ ಬಂದಂ, 'ತರಲ್ ಪೋದಂ' ಮುಂತಾಗಿ ಉದಾಹರಣೆಗಳನ್ನು ತೋರಿಸಿದ್ದಾನೆ. ಈ ಕಾರ್ಯಗಳು ಈಗಾಗಲೇ 'ಶಬ್ದಮಣಿದರ್ಪಣ'ದ ಸೂ.೨೪೫ರಲ್ಲಿ ಉಕ್ತವಾಗಿರುವ 'ಪ್ರಯೋಜನವಸ್ತ್ವಾಶ್ರಿತ ಹೇತುಕ್ರಿಯೆ' ಎಂದೂ 'ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆ' ಎಂದೂ ಕ್ರಮಾಗತವಾಗಿ ತಿಳಿದುಬರುತ್ತದೆ.

ಹೀಗಿರುವಾಗ ಬೇಡಂ/ಬೇಡ ಎಂಬ ಪ್ರತಿಷೇಧವಾಚಕಗಳ ಸಲುವಾಗಿ ಸೂ.೫೨೪-೨೯ರವರೆಗೆ ಧಾತು+ಅಲ್/ಅಲಿಂ ಪೂರ್ವದ ಕ್ರಿಯಾಪದರಚನೆಗಳನ್ನು ಭಟ್ಟಾಕಳಂಕನು ಏಕೆ ಪ್ರಸ್ತಾವಿಸಿದನು? ಅವನಿಗೆ ವಿಧ್ಯರ್ಥ ಪ್ರತಿಷೇಧಕ್ರಿಯಾಪದ ರಚನೆಯಲ್ಲಿ ಅಲ್/ಅಲಿಂ ಸ್ವತಂತ್ರವಾಗಿ ಬಳಕೆಯಾಗುತ್ತಿದ್ದುವು ಎಂಬುದು ತಿಳಿದಿದೆ. ಆ ಪ್ರತ್ಯಯದ ವಿಶಿಷ್ಟತೆಯನ್ನು ಕಾವ್ಯಪ್ರಯೋಗಗಳ ಮೂಲಕ ಸ್ಪಷ್ಟಪಡಿಸಿಕೊಳ್ಳದೆ ಬೇಡಂ/ಬೇಡ ಇವುಗಳಿಗೆ ವೈಕಲ್ಪಿಕ ರೂಪಗಳಾಗಿ ತಿಳಿದಿರುವಂತೆ ತೋರುವುದು. ಬೇಡಂ/ಬೇಡ ಕ್ರಿಯಾರ್ಥಕಾವ್ಯಯಗಳು ಎಂಬುದರಿಂದಾಗಿ ಅವು ಬಂದನ್/ಬಾರನ್, ಪೋದಂ/ಪೋಗನ್ ಎಂಬಂತೆ ನಡೆಯುವುದಿಲ್ಲ ಎಂಬ ಕಾರಣಕ್ಕಾಗಿಯೋ ಏನೋ ಇಲ್ಲಿ ಅವನ್ನು ಅಲ್/ಅಲಿಂ ಜೊತೆಗೆ ಬೆರಸಿ ವಿಚಾರಮಾಡಿ ಗೊಂದಲಕ್ಕೆ ಎಡೆಮಾಡಿದ್ದಾನೆ.

ಇದು ಏನೇ ಇದ್ದರೂ, ಧಾತುವಿಗೆ ಅಲ್/ಅಲಿಂ, ಬೇಡಂ/ಬೇಡ ಇವು ಸೇರುವ ಸಾಧ್ಯತೆಯಿದ್ದಾಗ ಅಲ್/ಅಲಿಂ ಸೇರಿದರೆ ಅದರೊಂದಿಗೆ ಮುಂದೆ ಬೇಡಂ/ಬೇಡ ಸೇರುವ ಅಗತ್ಯವಿಲ್ಲ, ಬೇಡಂ/ಬೇಡ ಸೇರಿದರೆ ಅದರ ಹಿಂದೆ ಅಲ್/ಅಲಿಂ ಬರಬೇಕಾದ ಅಗತ್ಯವಿಲ್ಲ ಎಂಬ ಮುಖ್ಯವಾದ ಪ್ರಕ್ರಿಯೆ (ಮ.ಪು ವಿಧ್ಯರ್ಥ ಪ್ರತಿಷೇಧ ಕ್ರಿಯಾಪದ ರಚನೆಯ ಪ್ರಕ್ರಿಯೆ) ಭಟ್ಟಾಕಳಂಕನ ತಿಳಿವಳಿಕೆಗೆ ಹೊಳೆಯದೆ ಹೋದುದು, ಅವನ ವ್ಯಾಕರಣ ಇತರ ಪ್ರಮಾದಗಳ ಪಂಕ್ತಿಯಲ್ಲಿ ಇದು ಕೂಡ ಸೇರುವಂತೆ ಮಾಡಿದೆ.

❑

# ನಿಷೇಧಾರ್ಥದಲ್ಲಿ–ಮಧ್ಯಮಪುರುಷ ಬಹುವಚನದ ಆಖ್ಯಾತ ಪ್ರತ್ಯಯ – (ಒಂದು ಜಿಜ್ಞಾಸೆ)

• ಕೆ. ರಘುರಾಮಭಟ್

**ಹೊ**ಸಗನ್ನಡ ವ್ಯಾಕರಣದ ಅಧ್ಯಯನ ಮತ್ತು ಅಧ್ಯಾಪನದ ಸಂದರ್ಭದಲ್ಲಿ, ನನ್ನಲ್ಲಿ ತಲೆದೋರಿದ ಸಂದೇಹಕ್ಕೆ, ಸಮರ್ಪಕ ಸಮಾಧಾನ ಪಡೆದುಕೊಳ್ಳುವ ಸದುದ್ದೇಶದಿಂದ, ಈ ಜಿಜ್ಞಾಸೆಯಿಂದ ಕೂಡಿದ ಅಭಿಪ್ರಾಯಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇನೆ.

ಹೊಸಗನ್ನಡ ವ್ಯಾಕರಣ ಕ್ಷೇತ್ರದಲ್ಲಿ, ಇಂದು ಸಾಕಷ್ಟು ಸಹಾಯಕ ಪರಾಮರ್ಶನ ಗ್ರಂಥಗಳು (Reference Books) ಲಭ್ಯವಿವೆ. ಮೇಲಿನ ಶೀರ್ಷಿಕೆ ಬಗೆಗೆ, ನನ್ನಲ್ಲಿ ಮೂಡಿದ ಸಂದೇಹದ ಕುರಿತು ನನಗೆ ಲಭ್ಯವಾದ ಎಂಟು ಗ್ರಂಥಗಳು ಮತ್ತು ಈ ವಿಷಯ ಪ್ರಸ್ತಾಪಿತವಾದ ಪುಟ ಸಂಖ್ಯೆ, ಪ್ರಕಟಣೆ ಇತ್ಯಾದಿ ವಿವರಗಳನ್ನು ಆರಂಭದಲ್ಲಿ ಇತ್ತು, ಆ ಬಳಿಕ ವಿಷಯದ ಕುರಿತು ನೇರವಾಗಿ ಉಲ್ಲೇಖಿಸುತ್ತೇನೆ.

(೧) **ಬಾಲ ವ್ಯಾಕರಣ** : (ಪ್ರಶ್ನೋತ್ತರ ಸಂವಾದ: ಬಾಸೆಲ್ ಮಿಶನ್ ಬುಕ್ ಡಿಪೋ ಮಂಗಳೂರು ಪ್ರಕಟಣೆ. ೧೯೫೦, ೨೫ನೇ ಆವೃತ್ತಿ; ಪುಟ ೩೧ ಮತ್ತು ೩೨ ಆಖ್ಯಾತ ರೂಪಗಳ ಪಟ್ಟಿಯ 'ನಿಷೇಧ' ರೂಪಗಳು – ನೋಡಿ)

(೨) **ಹೊಸಗನ್ನಡ ವ್ಯಾಕರಣ** : ವಿದ್ವಾನ್ ಶ್ರೀರಂಗನಾಥ ಶರ್ಮಾ (iv ಮುದ್ರಣ; ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ; ೧೯೮೬, ಪುಟ: ೯೦)

(೩) **ಕನ್ನಡ ಮಧ್ಯಮ ವ್ಯಾಕರಣ** : ಪ್ರೊ॥ ತೀ.ನಂ.ಶ್ರೀ. (ಪುಟ. ೯೨–೯೩)

(೪) **ಭಾಷಾದೀಪಿಕೆ** : ಶ್ರೀ ಟಿ.ಕೇಶವ ಭಟ್, ವಿದ್ವಾನ್ (ಪ್ರಕಾಶಕರು:ಯು.ಆರ್.ಶೈಣೈ ಎಂಡ್ ಸನ್ಸ್, ಮಂಗಳೂರು–೩. ೧೯೫೬; ಪುಟ–೬೦)

(೫) **ಪ್ರೌಢಶಾಲಾ ಕನ್ನಡ ಕೈಪಿಡಿ** : ಡಾ। ಕೆ.ಎಲ್.ಗೋಪಾಲಕೃಷ್ಣಯ್ಯ (ಪ್ರಕಾಶಕರು: ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು–೧. ೧೯೯೪, ಪುಟ ೪೪–೪೫)

(೬) **ಹಳಗನ್ನಡ ವ್ಯಾಕರಣ ಸೂತ್ರಗಳು** : ಪ್ರಸಾರಾಂಗ, ಮಂಗಳೂರು ವಿ.ವಿ.ಪ್ರಕಟಣೆ; ೧೯೮೫, ಪುಟ–೭೯)

(೭) **ಹೊಸಗನ್ನಡ ವ್ಯಾಕರಣ** : ಡಾ। ಟಿ.ಪಿ.ವೆಂಕಟಾಚಲ ಶಾಸ್ತ್ರೀ (ಪುಟ ೧೨೭–೧೨೮; ಪ್ರಥಮ ಮುದ್ರಣ, ೧೯೯೦, ಪ್ರಕಟಣೆ: ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು–೧೯)

(೮) **ನವಕರ್ನಾಟಕ ವ್ಯಾಕರಣ ಕೈಗನ್ನಡಿ:** ಕೆ. ದಾಮೋದರ ಐತಾಳ, (ಪ್ರಕಟಣೆ: ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಎರಡನೆಯ ಮುದ್ರಣ; ಮೇ ೧೯೯೪, ಪುಟ ೫೫–೫೬)

ಈ ಎಂಟು ಗ್ರಂಥಗಳಲ್ಲಿ ಅವರು ಮಧ್ಯಮಪುರುಷದ ಏಕವಚನ ಹಾಗೂ ಬಹುವಚನಗಳಿಗೆ ನೀಡಿದ ಧಾತುರೂಪ ಮತ್ತು ಆಖ್ಯಾತ ಪ್ರತ್ಯಯ ರೂಪಗಳ ಪಟ್ಟಿಯನ್ನು ಮಾತ್ರ ಕೆಳಗೆ ಕೊಡುತ್ತಿದ್ದೇನೆ. ಇಲ್ಲಿ ಸೂಚಿಸುವ ಕ್ರಮ ಸಂಖ್ಯೆ ಮೇಲೆ ಸೂಚಿಸಲಾದ ವ್ಯಾಕರಣ ಗ್ರಂಥಗಳ ಕ್ರಮ ಸಂಖ್ಯೆಯೆಂದು ಭಾವಿಸಬೇಕಾಗಿ ವಿನಂತಿ.

| | **ನಿಷೇಧಾರ್ಥ ರೂಪಗಳು: ಏಕವಚನ** | – | **ಬಹುವಚನ** |
|---|---|---|---|
| (೧) | ಎ (ಆಖ್ಯಾತ ಪ್ರತ್ಯಯ) | – | ಅರಿ (ಆಖ್ಯಾತ ಪ್ರತ್ಯಯ) |
| | ಮಾಡೆ (ಮಾಡು+ಎ) | – | ಮಾಡರಿ (ಮಾಡು+ಅರಿ) |
| | ನುಡಿಯೆ (ನುಡಿ+ಎ) | – | (ನುಡಿ+ಅರಿ) ನುಡಿಯಿರಿ |
| (೨) | (ಎ) | – | (ಇರಿ) |
| | ಮಾಡೆ | – | ಮಾಡಿರಿ |
| (೩) | (ಎ) | – | (ಇರಿ) |
| | ಮಾಡೆ | – | ಮಾಡಿರಿ |
| | ತಿಳಿಯೆ | – | ತಿಳಿಯಿರಿ |
| (೪) | ಹೋಗೆ | – | ಹೋಗಿರಿ (ಹೋಗದಿರುವಿರಿ) |
| (೫) | ನುಡಿಯೆ(ಎ) | – | ನುಡಿಯಿರಿ (ಇರಿ) |
| | ಕೊಡೆ (ಎ) | – | ಕೊಡಿರಿ (ಇರಿ) |
| (೬) | ಕಟ್ಟಯ್ | – | ಕಟ್ಟಿರ್ |
| (೭) | ಕುಡಿ+ಎ=ಕುಡಿಯೆ | – | ಕುಡಿ+ಅರಿ=ಕುಡಿಯಿರಿ |
| | ಮಾಡು+ಎ=ಮಾಡೆ | – | ಮಾಡು+ಅರಿ=ಮಾಡರಿ |

ಬೆಳೆ+ಎ=ಬೆಳೆಯೆ — ಬೆಳೆ+ಅರಿ=ಬೆಳೆಯರಿ

(೮) ನೀನು ಮಾಡೆ — ನೀವು ಮಾಡೆರಿ (ಮಾಡೆ+ಎರಿ?)

(ಕೆ.ದಾಮೋದರ ಐತಾಳರು ಕೊಟ್ಟ ಉದಾಹರಣೆಯಲ್ಲಿ ಬಹುವಚನದಲ್ಲಿ 'ಮಾಡೆರಿ' ಎಂಬ ರೂಪದಲ್ಲಿ ನಿಷೇಧಾರ್ಥಕದಲ್ಲಿ ಮಾಧ್ಯಮಪುರುಷ ಆಖ್ಯಾತ ಪ್ರತ್ಯಯ 'ಎರಿ' ಎಂದಾಗುತ್ತದೆ. ಆದರೆ ಮುಂದೆ (ಪುಟ ೫೬ರಲ್ಲಿ) ಕೊಡುವ ವಿವರಣೆಯಲ್ಲಿ ಅದನ್ನು 'ಅರಿ' ಎಂದಿದ್ದಾರೆ. ಇದನ್ನು ಗಮನಿಸಿದರೆ, ಶ್ರೀಯುತರಿಗೆ ಈ ವಿಷಯದಲ್ಲಿ ಗೊಂದಲವಿದ್ದಂತೆ ಭಾಸವಾಗುತ್ತದೆ.)

ಕ್ರ. ಸಂಖ್ಯೆ(೨) ಡಾ। ಟಿ.ವಿ. ವೆಂಕಟಾಚಲ ಶಾಸ್ತ್ರೀಯವರು (ತಮ್ಮ ಕೃತಿಯ ಪುಟ ೧೨೮ರ ವಿವರಣೆ ನೋಡಿ) ಹೀಗೆ 'ಇ, ಉ ಮತ್ತು ಎ' ಕಾರಾಂತ ಧಾತುರೂಪಗಳನ್ನು ಸೂಚಿಸಿ ಬಳಿಕ, "ಹೊಸಗನ್ನಡದಲ್ಲಿ ನಿಷೇಧಾರ್ಥಕಗಳ ಕ್ರಿಯಾಪದಗಳು ತೀರ ವಿರಳವಾಗಿ ಮಾತ್ರ ಮೇಲೆ ತೋರಿಸಿರುವಂತೆ ನಡೆಯುತ್ತವೆ. ಏಕೆಂದರೆ ಅವು **ರೂಢಿಯ ಸಹಜ ರೂಪಗಳಲ್ಲ, ಗ್ರಾಂಥಿಕ ರೂಪಗಳು.**" ಎಂದಿದ್ದಾರೆ. ಶ್ರೀ ಕೆ. ದಾಮೋದರ ಐತಾಳರು (ಪುಟ ೫೬ರಲ್ಲಿ) ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಡಾ। ಗೋಪಾಲಕೃಷ್ಣಯ್ಯ (ಅವರ ಗ್ರಂಥ ಪುಟ ೪೪ರಲ್ಲಿ) "ಧಾತುವಿಗೆ ಆಖ್ಯಾತ ಪ್ರತ್ಯಯಗಳನ್ನು ಹತ್ತಿಸಿ ನಿಷೇಧಾರ್ಥ ಸೂಚಿಸುವ ವಾಕ್ಯರಚನೆ ಈಚೆದ ಆಡುಮಾತಿನಲ್ಲೂ, ಬರೆವಣಿಗೆಯಲ್ಲೂ ಕಡಿಮೆಯಾಗಿದೆ. ಅದಕ್ಕೆ ಬದಲಾಗಿ 'ಇಲ್ಲ'ವೆಂಬುದನ್ನು ಸೇರಿಸಿಮಾಡಲಿಲ್ಲ, ಹೋಗಲಿಲ್ಲ ಎಂಬಂತೆ ಸಂಯುಕ್ತ ಕ್ರಿಯಾಪದಗಳನ್ನು ಉಪಯೋಗಿಸುವುದು ರೂಢಿಯಾಗಿದೆ" ಎನ್ನುತ್ತಾರೆ. (ಆದರೆ ಇವರು ಪ್ರಾಚೀನ ಉದಾಹರಣೆಗಳನ್ನು ಕೊಟ್ಟಿಲ್ಲ!)

ಈ ಎಂಟು ಕೃತಿಗಳಲ್ಲಿ, ತೀ.ನಂ.ಶ್ರೀಕಂಠಯ್ಯನವರು ಬರೆದ ವ್ಯಾಕರಣ ಗ್ರಂಥದಲ್ಲಿ ವ್ಯಾಕರಣದ ನಿಯಮ–ಪ್ರಯೋಗಗಳಿಗೆ ಅಲ್ಲಲ್ಲಿ ಗ್ರಾಂಥಿಕ/ಆಡುಮಾತಿನ ಉದಾಹರಣೆಗಳನ್ನು ನೀಡಿ, ಅದನ್ನು ನಿಜವಾದ ಅರ್ಥದಲ್ಲಿ 'ಶಾಸ್ತ್ರ'ವಾಗಿಸಿದ್ದಾರೆ. ಇನ್ನುಳಿದವರ ಕೃತಿಗಳಲ್ಲಿ ಕೇವಲ ಆಖ್ಯಾತ ಪ್ರತ್ಯಯ ಮತ್ತು ಧಾತುರೂಪಗಳಿಗೆ ಅವು ಸೇರಿದಾಗ ನಿಷ್ಪನ್ನವಾಗುವ ಸ್ವರೂಪಗಳನ್ನಷ್ಟೇ ತಿಳಿಸುತ್ತಾರೆ. ತೀ.ನಂ.ಶ್ರೀ. ಅವರ ಕೃತಿಯಲ್ಲೂ ನಿಷೇಧಾರ್ಥಕ ರೂಪದ ವಿಚಾರಕ್ಕೆ ಬಂದಾಗ, ಮಧ್ಯಮಪುರುಷ ಬಹುವಚನಕ್ಕೆ ಉದಾಹರಣೆ ಲಭ್ಯವಿಲ್ಲ! ಇದು ಗಮನಾರ್ಹ ವಿಚಾರ.

ಇಂದು ಹೊಸಗನ್ನಡದಲ್ಲಿ, ಹಲವಾರು ಮಂದಿ ವಿದ್ವಾಂಸರು ವ್ಯಾಕರಣ ಕೃತಿರತ್ನಗಳನ್ನು ರಚಿಸಿದ್ದಾರೆ. ಆದರೆ ನಾನಿಲ್ಲಿ ನನಗೆ ಲಭ್ಯವಾದ ಕೆಲವೇ ಕೃತಿಗಳನ್ನು ಪರಾಮರ್ಶಿಸಿದಾಗ, ನನ್ನ ಅನುಮಾನ–ಸಂದೇಹಗಳು ಹಾಗೆಯೇ ಉಳಿದುಕೊಂಡ ಫಲವಾಗಿ, ನನ್ನೀ ಜಿಜ್ಞಾಸೆಯನ್ನು ಈ ಲೇಖನದಲ್ಲಿ ಸಾದರಪಡಿಸುತ್ತಿದ್ದೇನೆ. ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಭಾಷಾ ವಿಜ್ಞಾನಿಗಳು ಈ ಕುರಿತು ಗಮನಹರಿಸಿ, ನನ್ನೀ ಜಿಜ್ಞಾಸೆಯನ್ನು ತಣಿಸಬೇಕಾಗಿ ಸಹೃದಯ ಅಪೇಕ್ಷೆ.

**ಇಲ್ಲಿ ನನ್ನ ಜಿಜ್ಞಾಸೆಯಿದು:**

ಬಾಸೆಲ್ ಮಿಶನ್ ಪ್ರಕಟಣೆಯವರು, ಡಾ। ಟಿ. ವಿ. ವೆಂಕಟಾಚಲ ಶಾಸ್ತ್ರೀ ಹಾಗೂ ಶ್ರೀ ಕೆ. ದಾಮೋದರ ಐತಾಳ–ಈ ಮೂವರು ಮಧ್ಯಮಪುರುಷ ಬಹುವಚನ ನಿಷೇಧಾರ್ಥಕ ಪ್ರತ್ಯಯವನ್ನು 'ಅರಿ' ಎಂದು ತೀರ್ಮಾನಿಸಿದರೆ, ಇನ್ನುಳಿದವರು(ವಿದ್ವಾನ್ ರಂಗನಾಥ ಶರ್ಮಾ, ತೀ.ನಂ.ಶ್ರೀ., ಶ್ರೀ ಟಿ.ಕೇಶವ ಭಟ್ಟ, ಡಾ। ಗೋಪಾಲಕೃಷ್ಣಯ್ಯ ಮೊದಲಾದವರು) 'ಇರಿ' ಎಂದು ನಿರ್ಣಯಿಸಿದ್ದಾರೆ. ಇದರಿಂದ ವಿದ್ವಾಂಸರಲ್ಲಿ ಈ ಕುರಿತು ಏಕಾಭಿಪ್ರಾಯವಿಲ್ಲ ಎನ್ನುವ ಅಂಶ ಸ್ಪಷ್ಟ. ಆದರೆ ಮತ್ತೊಂದು ವಿಚಾರ ಗಮನಿಸಿ–ಈ ವ್ಯಾಕರಣ ಕರ್ತೃಗಳಾರೂ ತಮ್ಮ ಕೃತಿಗಳಲ್ಲಿ ವ್ಯಾಕರಣದ ನಿಯಮ, ಪ್ರಯೋಗಗಳಿಗೆ ಉದಾಹರಣೆಗಳನ್ನು ನೀಡಿಲ್ಲ! ಎಲ್ಲರೂ ಧಾತುರೂಪಗಳನ್ನಷ್ಟೇ ಕೊಟ್ಟಿದ್ದಾರೆ. ವ್ಯಾಕರಣ ಒಂದು ಶಾಸ್ತ್ರ. 'ಪ್ರಯೋಗ ಶರಣಾಃ ವೈಯಾಕರಣಾಃ'; 'ಯೋಗಾತ್ ರೂಢಿರ್ಬಲೀಯಸಿ' ಇತ್ಯಾದಿ ಪ್ರಸಿದ್ಧ ಉಕ್ತಿಗಳಂತೆ, ವ್ಯಾಕರಣ ರಚನೆಗಳು ಶಾಸ್ತ್ರೀಯವೆನಿಸುವುದು ಕೇವಲ ಸೂತ್ರ, ನಿಯಮಗಳಿಂದಲ್ಲ. ಅಲ್ಲಿ ಪ್ರತಿ ಸೂತ್ರ ನಿಯಮಗಳಿಗೆ ಪೂರ್ವ ಕವಿ ಪ್ರಯೋಗ (ಗ್ರಾಂಥಿಕ) ಆಡುನುಡಿಯ ಪ್ರಯೋಗಗಳ ಉದಾಹರಣೆಗಳಿರಬೇಕು. ('ಪ್ರಯೋಗದಲ್ಲಿಲ್ಲದಿರುವ ಅಪೂರ್ವ ಪದಗಳನ್ನು ಸೃಷ್ಟಿ ಮಾಡುವ ಹಕ್ಕು ವ್ಯಾಕರಣಕ್ಕಿಲ್ಲ. ಅವೆಲ್ಲ ದೋಷಗಳೇ ಸರಿ. ಪ್ರಯೋಗದಲ್ಲಿದ್ದ ಶಬ್ದಗಳನ್ನೆ ಒಂದು ಕ್ರಮದಲ್ಲಿ ಶ್ರುತಿ ಹಿತವಾಗಿ ಪ್ರಯೋಗಿಸುವುದನ್ನು ತಿಳಿಸುವ ವಿಧಾನವೇ ವ್ಯಾಕರಣ..." ಎಂ.ರಾಜಗೋಪಾಲಚಾರ್ಯ, ನವಕರ್ನಾಟಕ ವ್ಯಾಕರಣ ಕೈಗನ್ನಡಿಯ ಮುನ್ನುಡಿಯಲ್ಲಿ, ಪುಟ ೫ರಲ್ಲಿ ಆಡಿದ ಈ ಮಾತುಗಳು ಎಷ್ಟು ಅರ್ಥಪೂರ್ಣ.) ದುರದೃಷ್ಟವೆಂದರೆ ಮಧ್ಯಮ ಪುರುಷ ಬಹುವಚನದ ಆಖ್ಯಾತ ಪ್ರತ್ಯಯವೆಂದು ಹೇಳುವ ರೂಪಗಳಾದ 'ಅರಿ'(?)–'ಇರಿ' ಎಂಬೀ ರೂಪಗಳಾವುವೂ ರೂಢಿಯಲ್ಲಿಲ್ಲ.

ಕನ್ನಡದ ಉಪಭಾಷೆಗಳಾದ (ನನ್ನ ಪರಿಸರದ ಭಾಷೆಗಳಾದ ಹವ್ಯಕ ಕನ್ನಡ, ಕೋಟ–ಬಾರಕೂರು ಕನ್ನಡ ಹಾಗೂ ಕನ್ನಡದ ಸೋದರಿ ಭಾಷೆಯಾದ ತುಳು ಭಾಷೆಯತ್ತ ಗಮನ ಹರಿಸುವುದೊಳಿತೇನೋ ಎಂದು ಭಾವಿಸಿ ಅವುಗಳನ್ನು ಗಮನಿಸಿದೆ.) ಕಾಸರಗೋಡು–ಕುಂಬಳೆ ಪರಿಸರದ ಹವ್ಯಕ ಕನ್ನಡ–ಕೋಟ ಕನ್ನಡ, ಬಾರಕೂರು ಕನ್ನಡ ಮೊದಲಾವ ನನ್ನ ಅರಿವಿಗೆ ಬಂದ ಭಾಷೆಗಳಲ್ಲಿ ಬಳಕೆಯಾಗುತ್ತಿರುವ ಪದ ಪ್ರಯೋಗಗಳನ್ನು ಗಮನಿಸೋಣ.

| **ನಿಷೇಧಾರ್ಥಕ ರೂಪಗಳು:** | | **ಮಧ್ಯಮಪುರುಷ:** |
|---|---|---|
| | | ಏಕವಚನ ಬಹುವಚನ |
| ೧. ಕುಂಬಳೆ ಸೀಮೆ(ಕಾಸರಗೋಡು)ಯ **ಹವ್ಯಕ ಕನ್ನಡ**. | (೧) | ನೀನು ನೀರು **ಕುಡಿಯೆ** –ನಿಂಗೊ ನೀರು **ಕುಡಿಯೆಯಿ** |
| | (೨) | ನೀನು ಆಟ **ಆಡೆ**–ನಿಂಗೊ ಆಟ **ಆಡೆಯಿ**. |
| | (೩) | ನೀನು ಓಟು **ಕೊಡೆ**–ನಿಂಗೊ ಓಟು **ಕೊಡೆಯಿ** |
| | (೪) | ನೀನು ಕೆಲಸ **ಮಾಡೆ**–ನಿಂಗೊ ಕೆಲಸ **ಮಾಡಿಯಿ** |

(೫) ನೀನು ತಿನ್ನೆ–ನಿಂಗೊ ತಿನ್ನಯಿ

–ಇಲ್ಲಿ ಏಕವಚನದಲ್ಲಿ 'ಎ';– ಬಹುವಚನದಲ್ಲಿ 'ಇ' ಪ್ರತ್ಯಯಗಳಾಗಿವೆ.

**(೨) ಕೋಟ ಕನ್ನಡ**
(ನನ್ನ ಸಹೋದ್ಯೋಗಿ ಮಿತ್ರ ಕೋಟ ಹಂದಟ್ಟು ನಿವಾಸಿಯೊಬ್ಬರಿಂದ ಪಡೆದ ಮಾಹಿತಿಯ ಆಧಾರದಿಂದ)

ನೀನು ಮಾಡೆ–ನೀವು ಮಾಡೆರಿ
(ಉದಾ: ನೀವು ಅಂಥ ಕೆಟ್ಟ ಕೆಲಸ ಖಂಡಿತಾ ಮಾಡೆರಿ/ಮಾಡ್‌ರಿ)
ಹಾಗೆಯೇ ನೀವು ಓಡ್ರಿಯೆ, ತರ್ರಿಯೇ, ಆಡ್ರಿಯೆ–ಇತ್ಯಾದಿ.

–ಇಲ್ಲಿ ಬಹುವಚನದಲ್ಲಿ '–ಎರಿ' / 'ಇಯೇ' 'ಇರಿ' ರೂಪಗಳು ಲಭ್ಯ.

**(೩) "ಭಾರಕೂರು ಕನ್ನಡ"**
ಡಾ। ಶ್ರೀರಮಣ ಆಚಾರ್ಯ ಅಲೆವೂರು, ಇವರ ಇದೇ ಹೆಸರಿನ 'ಸಂಶೋಧನಾತ್ಮಕ ಮಹಾಪ್ರಬಂಧ ಡೆಕ್ಕಾನ್ ಕಾಲೇಜು ಪೂನಾ ದಿಂದ ೧೯೭೧ರಲ್ಲಿ ಪ್ರಕಟವಾಗಿದೆ. ಅದು ಇಂಗ್ಲೀಷಿನಲ್ಲಿದೆ. ಇದರ ಸಂಕ್ಷಿಪ್ತ ಕನ್ನಡ ರೂಪ ಅವರೆ ಬರೆದಿದ್ದು; "ಪಾರಮ್ಯ" ಗ್ರಂಥಪತ್ರಿಕೆ (೧೯೯೭–೯೮) ನೇಶನಲ್ ಪ.ಪೂ.ಕಾಲೇಜು – ಸಂಚಿಕೆಯಲ್ಲಿ ಪುಟ ೪೯–೫೫ರಲ್ಲಿ ನೋಡಿ.

**ಧಾತು–ಕುಡಿ:** ನಿಷೇಧಾರ್ಥ ರೂಪಗಳು

| ಏಕವಚನ | ಅನೇಕ ವಚನ |
| --- | --- |
| ಪುರುಷ॥–**ಕುಡಿಯೆ**(–ಎ) | –**ಕುಡೀರಿ**(–ಈರಿ) |

(ಪಾರಮ್ಯ ಪುಟ. ೫೩)
("...ನಿಷೇಧಾರ್ಥ ರೂಪಗಳ ವಿಶ್ಲೇಷಣೆಯು ಬಾರಕೂರು ಕನ್ನಡದಲ್ಲಿ ಸರಳವಾಗಿಲ್ಲ. ಇಲ್ಲಿ ಕಂಡುಬರುವ ಆಖ್ಯಾತ ಪ್ರತ್ಯಯಗಳು ನಿಷೇಧಾವಾಚಕ ಪ್ರತ್ಯಯ ಹಾಗೂ ಆಖ್ಯಾತ ಪ್ರತ್ಯಯಗಳ ಪರಸ್ಪರ ಸಂಮಿಶ್ರದಿಂದ ಹೊಸ ರೂಪಗಳನ್ನು ಹೊಂದುತ್ತಿವೆ" ಎಂಬ ವಿಚಾರವನ್ನು ತಿಳಿಸುವುದರೊಂದಿಗೆ ಇಲ್ಲಿ ಹೆಚ್ಚಿನ ಸಂಶೋಧನೆ ನಡೆಯಬೇಕಿದೆ ಎಂಬ ಎಚ್ಚರದ ಸೂಚನೆ ನೀಡಿದ್ದಾರೆ.

**(೪) ತುಳು ಭಾಷೆಯಲ್ಲಿ:**

ಆಧಾರ: 'ವರ್ಣನಾತ್ಮಕ ತುಳು ವ್ಯಾಕರಣ' ಗ್ರಂಥ
ರಚನೆ: ಡಾ। ರಾಮಕೃಷ್ಣ ಶೆಟ್ಟಿ, ಪ್ರಾಧ್ಯಾಪಕರು, ಅಣ್ಣಾಮಲೈ ವಿಶ್ವವಿದ್ಯಾನಿಲಯ, ತಮಿಳುನಾಡು.
ಪ್ರಕಟಣೆ: ೧೯೮೭, ಕನ್ನಡ ಸಂಘ, ವಿವೇಕಾನಂದ ಕಾಲೇಜು, ಪುತ್ತೂರು (ಪುಟ ೯೦, ೯೧, ೯೨, ೯೩, ೯೪) ನೋಡಿ.

**ನಿಷೇಧಾರ್ಥಕದಲ್ಲಿ:**
ಮಧ್ಯಮಪುರುಷ ಏಕವಚನ–ಬಹುವಚನ

| | | |
| --- | --- | --- |
| ಕಲ್ತ್‌ಜ(–ಅ) | – | ಕಲ್ತ್‌ಜರ್(–ಅರ್) |
| ದೀಜ(–ಅ) | – | ದೀಜರ್(–ಅರ್) |
| ಪಾತೆರ್ಜ(–ಅ) | – | ಪಾತೆರ್ಜರ್(–ಅರ್) |
| ಉಂಜ(–ಅ) | – | ಉಂಜರ್(–ಅರ್) |

ಈ ಸಮೀಕ್ಷೆಗಳಿಂದ ಕುಂಬಳೆ ಸೀಮೆ ಹವ್ಯಕದಲ್ಲಿ ಏಕವಚನದಲ್ಲಿ 'ಎ'; ಬಹುವಚನದಲ್ಲಿ 'ಇ'; ಕೋಟ ಭಾಷೆಯಲ್ಲಿ–'ಎರಿ, ಇಯೆ, ಇರಿ; ಬಾರಕೂರು ಕನ್ನಡದಲ್ಲಿ '–ಈರಿ'

ರೂಪಗಳಾದರೆ, ತುಳುವಿನಲ್ಲಿ '-ಅರ್' ಎಂಬ ಒಂದೇ ರೂಪವಿದ್ದಂತಿದೆ. ಹೊಸಗನ್ನಡದಲ್ಲಿ ಗ್ರಾಂಥಿಕ/ವ್ಯಾವಹಾರಿಕ ಆಡುನುಡಿಯ ಪ್ರಯೋಗಗಳಲ್ಲಿಯೂ ಉದಾಹರಣೆ, ಪ್ರಯೋಗಗಳು ದೊರಕದೆ ಇರುವುದರಿಂದ ಮೇಲೆ ಹೇಳಿದ ಗೊಂದಲವುಂಟಾಗಿದೆ. ಈ ಕುರಿತು ಆಳವಾಗಿ ಅಧ್ಯಯನ ನಡೆಸಿದ ಭಾಷಾ ಪರಿಣತರು, ಭಾಷಾ ವಿಜ್ಞಾನಿಗಳು ಸೋದಾಹರಣವಾಗಿ ಈ ಸಮಸ್ಯೆಯತ್ತ ಬೆಳಕು ಹರಿಸಬೇಕಾದ್ದು ಅನಿವಾರ್ಯ.



# ಶೀಲವಂತ ಸೋಮಾಪುರದ ಚೌವ್ವೀಸ ತೀರ್ಥಂಕರರ ಶಿಲ್ಪ ಮತ್ತು ಶಾಸನ

• ಡಾ. ಅಪ್ಪಣ್ಣ ಎನ್.ಹಂಜೆ

## ೧. ಪೀಠಿಕೆ

ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲ್ಲೂಕಿನ ಶೀಲವಂತ ಸೋಮಾಪುರ ಗ್ರಾಮವು, ಶಿಗ್ಗಾಂವದಿಂದ ಪಶ್ಚಿಮಕ್ಕೆ ೮ ಕಿ.ಮೀ. ಅಂತರದಲ್ಲಿದೆ. ಶಿಗ್ಗಾಂವ ಪ್ರದೇಶದ ಬಂಕಾಪುರ, ಅರಟಾಳ, ದೇವಗಿರಿ, ನಿಡಗುಂದಿ, ಕಲ್ಯಾಣ ಮೊದಲಾದ ಮಧ್ಯಯುಗೀನ ಜೈನ ಕೇಂದ್ರಗಳಲ್ಲಿ ಈ ಗ್ರಾಮವೂ ಒಂದಾಗಿದೆ. ಈ ಗ್ರಾಮದ ಹಳೆಯ ಆದಿನಾಥ ಜಿನಾಲಯದಲ್ಲಿ ಕ್ರಿ.ಶ.ಸುಮಾರು ೧೨ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ ತೀರ್ಥಂಕರನ ಶಿಲ್ಪವಿದೆ. ಈ ಶಿಲ್ಪದ ಪ್ರತಿಮಾ ಲಕ್ಷಣಗಳು, ಈ ಶಿಲ್ಪದಲ್ಲಿರುವ ಶಾಸನದ ಪಾಠ, ಸಾರಾಂಶ ಮತ್ತು ಮಹತ್ವವನ್ನು ಚರ್ಚಿಸುವುದು ಪ್ರಸ್ತುತ ಸಂಲೇಖನದ ಆಶಯವಾಗಿದೆ.

## ೨. ಶಿಲ್ಪದ ಪ್ರತಿಮಾ ಲಕ್ಷಣಗಳು

ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಶಿಲ್ಪವು ೩೫ ಸೆಂ.ಮೀ. ಎತ್ತರ ಮತ್ತು ೨೫ ಸೆಂ.ಮೀ. ಅಗಲವಾಗಿದೆ. ಶಿಲ್ಪದ ಮಧ್ಯದಲ್ಲಿ ಆದಿನಾಥ ತೀರ್ಥಂಕರನು ಕಾಯೋತ್ಸರ್ಗದಲ್ಲಿದ್ದಾನೆ. ಈತನ ಶಿರದ ಮೇಲ್ಭಾಗದಲ್ಲಿ ಮುಕ್ಕೊಡೆಯಿದ್ದು, ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಶಿರದ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಆದಿನಾಥನ ಕಾಲುಗಳ ಬಲಬದಿಯಲ್ಲಿ ಗೋಮುಖ ಯಕ್ಷ ಎಡಬದಿಯಲ್ಲಿ ಚಕ್ರೇಶ್ವರಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು

ಸರ್ವಾಲಂಕೃತರಾಗಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಆದಿನಾಥನ ಸುತ್ತಲೂ ಪರ್ಯಂಕಾಸನದಲ್ಲಿರುವ ಇಪ್ಪತ್ಮೂರು ಜನ ತೀರ್ಥಂಕರರ ಸಾಲು ಶಿಲ್ಪಕ್ಕೆ ಪ್ರಭಾವಳಿಯನ್ನು ರೂಪಿಸಿದಂತಿದೆ. ಈ ಶಿಲ್ಪವು ಚಿಕ್ಕದಾದರೂ ನೈಜವಾಗಿ ಮೂಡಿಬಂದಿದೆ. ಇದು ಸಮಕಾಲೀನ ಶಿಲ್ಪಿಯ ಕೈಚಳಕವನ್ನು ಎತ್ತಿ ತೋರಿಸುತ್ತದೆ.

## ೩. ಶಾಸನದ ಪಾಠ

ಆದಿನಾಥ ತೀರ್ಥಂಕರನ ಶಿಲ್ಪದ ಮಧ್ಯದಲ್ಲಿ ಅಂದರೆ ಆದಿನಾಥ ತೀರ್ಥಂಕರನ ಪಾರ್ಶ್ವಗಳಲ್ಲಿ ಶಾಸನವಿದೆ. ಜೊತೆಗೆ ಶಿಲ್ಪದ ಇಕ್ಕೆಲಗಳಲ್ಲಿ ಅಂದರೆ ಪ್ರಭಾವಳಿ ರೀತಿಯಲ್ಲಿಯೂ ಬರವಣಿಗೆಯಿದೆ. ಈ ಬರವಣಿಗೆ ತುಂಬಾ ತ್ರುಟಿತವಾಗಿದೆ. ಹೀಗಾಗಿ ಆದಿನಾಥನ ಪಾರ್ಶ್ವಗಳಲ್ಲಿರುವ ಬರವಣಿಗೆಯನ್ನು ಮಾತ್ರ ಗಮನಿಸಲಾಗಿದೆ.

| | | | |
|---|---|---|---|
| ೧. | ಶ್ರೀ ಮೂ | ೨. | ಲಸಂ |
| ೩. | ಘ [ದ*] ಕಾ | ೪. | ಣೂರ್ಗ್ಗ |
| ೫. | ಣ [ದ*] ಮಾ | ೬ | ಧವಚಂ |
| ೭ | ದ್ರಭಟ್ಟಾ | ೮. | ರಕ |
| ೯. | ರ ಗುಡ್ಡ | ೧೦. | ಗಳು |
| ೧೧. | ಮಾರನ | ೧೨. | ಜಕಾರ |
| ೧೩. | ಯನ | ೧೪. | ಹೆಂ |
| ೧೫. | ಡತಿ | ೧೬. | ಸಿರಿ |
| ೧೭. | ಯಲಾ | ೧೮. | ದೇ |
| ೧೯. | ವಿ | ೨೦. | –ಕೆ |
| ೨೧. | ರೆಯ | ೨೨. | ಕಾಳ |
| ೨೩. | ವ್ವೆ ಮು | ೨೪. | ಖ್ಯವಾ |
| ೨೫. | ಗಿಅ | ೨೬. | ನಂತ |
| ೨೭ | ನಿವೇ | ೨೮. | ದ್ಯ |
| ೨೯. | ದ | ೩೦. | – |
| ೩೧. | – | | |

## ೪. ಶಾಸನದ ಸಾರಾಂಶ

ಶ್ರೀ ಮೂಲಸಂಘದ ಕಾಣೂರ್ಗ್ಗಣದ ಮಾಧವಚಂದ್ರ ಭಟ್ಟಾರಕದೇವನ ಶಿಷ್ಯ ಮಾರನದ ಕಾರಯ್ಯನ ಧರ್ಮಪತ್ನಿ ಸಿರಿಯಲಾದೇವಿ ಮತ್ತು ಕೆರೆಯ ಕಾಳವ್ವೆ ಮುಖ್ಯವಾಗಿ ದೇವರ ಅನಂತ ನೈವೇದ್ಯಕ್ಕಾಗಿ ದಾನ ಮಾಡಿದರು.

## ೫. ಶಾಸನದ ಮಹತ್ವ

ಪ್ರಸ್ತುತ ಶಾಸನೋಕ್ತ ಮಾಧವಚಂದ್ರ ಭಟ್ಟಾರಕ ಮುನಿಯು ಅರಟಾಳದ ಕ್ರಿ.ಶ. ೧೧೨೨ರ ಶಾಸನದಲ್ಲಿಯೂ ಉಲ್ಲೇಖಿತನಾಗಿದ್ದಾನೆ.[೧] ಶೀಲವಂತ ಸೋಮಾಪುರದಿಂದ ಪಶ್ಚಿಮಕ್ಕೆ ೨

ಕಿ.ಮೀ. ಅಂತರದಲ್ಲಿರುವ ಅರಟಾಳವು ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಪ್ರಸಿದ್ಧ ಜೈನಕೇಂದ್ರವಾಗಿತ್ತು. ಈ ಗ್ರಾಮದಲ್ಲಿ ಮಾಧವಚಂದ್ರ ಮುನಿಯ ಶಿಷ್ಯ ಕನಕಚಂದ್ರ ಸಿದ್ಧಾಂತದೇವ ಮುನಿಯ ಶಿಷ್ಯ ಗಂಗ ಮನೆತನದ ಬಮ್ಮಿಸೆಟ್ಟಿ ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿದ್ದಾನೆ. ಈ ಜಿನಾಲಯದಲ್ಲಿರುವ ಕ್ರಿ.ಶ. ೧೧೨೨ರ ಶಾಸನವು ಮಾಧವಚಂದ್ರ ಮುನಿಯನ್ನು ಈ ಮುಂದಿನಂತೆ ವರ್ಣಿಸಿದೆ. ಮುನಿಜಂಗಮ ಜೈನಬಿಂಬವಾಗಿ, ಜೈನಶಾಸನ ರಕ್ಷಣಾಮಣಿಯಾಗಿ, ಶಾಂತಚಿತ್ತನಾಗಿ, ಸಕಲ ರಾಗದ್ವೇಷ ದೋಷಗಳಿಂದ ಮುಕ್ತನಾಗಿ, ಭೂತಾಯಿಯ ಪ್ರೀತಿಯ ತನಯವಾಗಿ, ಗುಣಪ್ರಮೇಯನಾಗಿ, ಎಲ್ಲಡೆಗೂ ಶೋಭಿಸುತ್ತಿದ್ದ ಮಾಧವಚಂದ್ರದೇವ ಮುನಿ ಚಾರಿತ್ರಚಕ್ರೇಶ್ವರ ಎಂಬ ಬಿರುದಿಗೆ ಭಾಜನನಾಗಿದ್ದನು. ಜಿನಮತ ಲಕ್ಷ್ಮಿಗೆ ಅಭ್ಯುದಯವನ್ನು ತಂದಿತ್ತು ಭವ್ಯಜನರ ಅನುರಾಗವನ್ನು ಗೆದ್ದುಕೊಂಡು ತನ್ನ ವೀತರಾಗ ಚಾರಿತ್ರದಿಂದ ವಿಶುದ್ಧ ಮಾರ್ಗದಲ್ಲಿ ಪ್ರವರ್ತಿಸಿ ಸತ್ಯ ತಪೋನಿಧಾನನೆಸಿದ್ದನು. ಅಂತಹರ ಪ್ರಭಾವದಿಂದ ಜಿನಮತವು ಚಿಗುರೊಡೆಯುತ್ತ ಪಲ್ಲವಿಸುತ್ತಿತ್ತು. ಅನುಪಮ ಯೋಗಿಯಾಗಿ ಈ ವಸುಧೆಯನ್ನು ಪಾವನಗೊಳಿಸಿದ ಮಾಧವಚಂದ್ರರಂತಹ ಅನುಪಮಯೋಗಿ ಜನಿಸುವುದೇ ವಿಶೇಷವೆಂದು ಜನ ಹೊಗಳುತ್ತಿತ್ತು.

ಹೀಗೆ ವಿಶೇಷವಾದ ಪಾಂಡಿತ್ಯ ತಪಸ್ಸುಗಳಿಂದ ಜನಪ್ರಿಯತೆಯನ್ನು ಗಳಿಸಿದ್ದ ಮಾಧವಚಂದ್ರ ಭಟ್ಟಾರಕದೇವ ಮುನಿಯು ಶಿಗ್ಗಾಂವ ಪರಿಸರದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಪ್ರೇರಣೆ ನೀಡಿ ಸಮಾಜವನ್ನು ಜಾಗೃತಗೊಳಿಸಿದ್ದಾನೆ. ಒಟ್ಟಾರೆ ಈ ಶಿಲ್ಪ ಮತ್ತು ಶಾಸನವು ಶಿಗ್ಗಾಂವ ಪ್ರದೇಶದ ಜೈನ ಧರ್ಮದ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖ ಆಕರವೆಂದರೆ ಅತಿಶಯೋಕ್ತಿಯಾಗಲಾರದು.

❑

---

೧. ಹಂಜೆ ಅಪ್ಪಣ್ಣ ಎನ್., ಅರಟಾಳದ ಪಾರ್ಶ್ವನಾಥ ಜಿನಾಲಯ : ವಾಸ್ತು-ಶಿಲ್ಪ-ಶಾಸನ (೨೦೦೫). ಪು. ೧೫-೨೩.

# ಮನಗುಂಡಿಯ ಶಾಸನ

• ಹನುಮಾಕ್ಷಿ ಗೋಗಿ

ಸ್ಥಳ: ಕಲ್ಲಪ್ಪನ ಹಕ್ಕಲು-ಕೆಲಗೇರಿ ಅವರ ಹೊಲ

ಕಾಲ: ಕ್ರಿ.ಶ. ೧೦೮೦ ಮತ್ತು ೧೦೮೮.

**ಧಾ**ರವಾಡ ತಾಲೂಕಿನ ಒಂದು ಹಳ್ಳಿ ಮನಗುಂಡಿ. ಅಲ್ಲಿ ದೊರೆತ ಹೊಸ ಶಾಸನವಿದು. ಶಾಸನದ ಫಲಕದ ಮೇಲಿನ ಒಂದೂ ಕಾಲುಅಡಿ ಭಾಗದಲ್ಲಿ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಖಡ್ಗ, ಆಕಳು-ಕರು, ಮಂಟಪದ ಮಧ್ಯೆ ಪದ್ಮಾಸನಸ್ಥ ತೀರ್ಥಂಕರನಿದ್ದು ಮೇಲೆ ಮುಕ್ಕೊಡೆಯಿದೆ. ಎಡ-ಬಲಗಳಲ್ಲಿ ಮೇಲೆ ಚಾಮರಧಾರಿಗಳಿದ್ದಾರೆ. ಕೆಳಗೆ ಅರ್ಧ ಅಡಿ ಗಾತ್ರದ ಆಳವಾದ ಅಕ್ಷರಗಳನ್ನು ಸುಂದರವಾಗಿ ಕೆತ್ತಲಾಗಿದೆ. ಶಾಸನದ ಬಲಭಾಗದ ಕೊನೆಯಲ್ಲಿ ಒಂದೆರಡು ಕಡೆ ಮಾತ್ರ ಕಚ್ಚು ಬಿದ್ದು ಅಕ್ಷರಗಳು ಹಾಳಾಗಿವೆ. ಕೆಲವೆಡೆ ಸಕಾರಕ್ಕೆ ಬದಲಾಗಿ ಶಕಾರ ಬಳಸಿದೆ. ಅರ್ಕಾವಳಿ ಬರುವಲ್ಲೆಲ್ಲ ದ್ವಿತ್ವ ಬಳಕೆಗೊಂಡಿದೆ.

ಗೋವೆಯ ಕದಂಬರ ಕಾಲದ ಶಾಸನವಿದಾಗಿದೆ. ಚಟ್ಟಯ್ಯದೇವ, ಜಯಕೇಶಿದೇವ ಮತ್ತು ಗೂವಲದೇವರನ್ನು ಹೆಸರಿಸುತ್ತಿದ್ದು, ಜಯಕೇಶಿದೇವನ ಪಟ್ಟಮಹಾದೇವಿ ಆಚಲದೇವಿಯರ ಅಬ್ಬೆ ನಿಗುಂಬರ ಬಿಜ್ಜರಸನ ಅರಸಿ ಲೋಕಬ್ಬರಸಿ ಮಾರಜವಾಡಿ ನಾಡಿನ ಪುಲ್ಲಂಬಿ ಕಂಪಣದ ಬಳಿಯ ಅಗ್ರಹಾರ ಮಣಿಗುಂದಗೆಯಲ್ಲಿ ಮಾಡಿಸಿದ ಬಸದಿ, ಬಿಟ್ಟ ಭೂಮಿದಾನವನ್ನು ತಿಳಿಸುತ್ತದೆ.

ತದನಂತರ ದಾಯಿಮಯ್ಯ ಸೆಟ್ಟಿಯರು ಮತ್ತು ಮಣಿಗುಂದಗೆಯ ಊರೊಡೆಯ ನಾರಣಯ್ಯ ನಾಯಕ ಅದೇ ಬಸದಿಗೆ ಬಿಟ್ಟ ಭೂಮಿದಾನವನ್ನು ತಿಳಿಸುತ್ತದೆ. ಈ ದಾನವನ್ನು

ಯಾಪನೀಯ ಸಂಘ ಕುಮ್ಮುಡಿ ಗಣದ ಮಣಿಗುನ್ದಗೆಯ ಲೋಕಾದೇವಿ ಬಸದಿಗೆ ವುಮಚಿಗೆಯ ಕೀರ್ತ್ತಿಮಾರ್ತ್ತಂಡ ಜಿನಾಲಯದ ಆಚಾರ್ಯ ಮುನಿಚಂದ್ರ ಸಿದ್ಧಾಂತಿಗರ ಕಾಲ್ತೊಳೆದು ಬಿಡಲಾಯಿತು ಎಂಬುದನ್ನು ಉಲ್ಲೇಖಿಸುತ್ತದೆ. ಈ ದಾನದ ನಂತರ ಫಲಶ್ರುತಿಯನ್ನು ಸಂಸ್ಕೃತ ಶ್ಲೋಕಗಳ ಮೂಲಕ ತಿಳಿಸಿದೆ.

ಮುಂದಿನ ಭಾಗದಲ್ಲಿ ವರ್ದ್ಧಮಾನ ಜಿನೇಂದ್ರನ ಶಿಷ್ಯ ಸುಧರ್ಮಸ್ವಾಮಿ ಗಣಧರ ದೇವರು ಅವರ ಅನ್ವಯದಲ್ಲಿ ಯಾಪನೀಯ ಸಂಘದ ಕುಮ್ಮುಡಿಗಣದ ಸಂತತಿಯನ್ನು ವಿವರಿಸುತ್ತದೆ. ಶ್ರೀ ಕೀರ್ತಿ ಗೊರವಡಿಗಳು ಅವರ ಶಿಷ್ಯಸನ್ತತಿಯ ಪ್ರಭಾಚಂದ್ರದೇವರು, ನರೇಂದ್ರಕೀರ್ತಿಸಿದ್ಧಾಂತಸ್ವಾಮಿಗಳು, ಅವರ ಶಿಷ್ಯರು ಚಾರಿತ್ರ ಚಕ್ರವರ್ತಿಗಳೆನಿಸಿದ ನಾಗವೀರಸ್ವಾಮಿಗಳು, ನಿರವದ್ಯದೇವರು, ಸುಭಚಂದ್ರದೇವರು, ರಾಮಚಂದ್ರದೇವರು, ಗೋವರ್ಧನ ತ್ರೈವಿದ್ಯದೇವರು ಮತ್ತು ಅಸ್ಯಂತ ಸುಪ್ರಸಿದ್ಧರಾದ ಅನನ್ತವೀರ್ಯ ಪಂಡಿತರು. ಅವರ ಶಿಷ್ಯೆಯಾದ ಲೋಕಾದೇವಿ ಅತ್ಯಂತ ಭವ್ಯವೂ ಸುಂದರವೂ ಆದ ಜಿನದೇಗುಲವನ್ನು ಕಟ್ಟಿಸಿದಳೆಂದು ವಿವರಿಸಿ, ಕೊನೆಯಲ್ಲಿ ಮತ್ತೆ ದಾವಣಂದಿ ಭಟ್ಟಾರಕ ಅವರ ಶಿಷ್ಯ ನಾಗವೀರದೇವರು, ದೇವಸಿರಿ ಕನ್ತಿ, ಶ್ರೀ ಕನ್ತಿ, ಚಾರುಮತಿಯಬ್ಬೆ, ಜಿನಮತಿಯಬ್ಬೆಯರನ್ನು ಹೆಸರಿಸುತ್ತ, ರಾಮಚಂದ್ರದೇವರು ಗುಡ್ಡ ಭೀಮಣ್ಣ ಈ ಶಾಸನವನ್ನು ಬರೆದನೆಂದು, ಬಡಗಿ ಕೇತೋಜನ ಕಂಡರಣೆ ಎಂದು ತಿಳಿಸುತ್ತದೆ.

ಗದ್ಯಪದ್ಯಗಳಿಂದ ಕೂಡಿದ ಚಂಪೂಶೈಲಿಯ ಶಾಸನ ಓದುಗರನ್ನು ಆಕರ್ಷಿಸುತ್ತದೆ. ೧೧ನೆಯ ಶತಮಾನದ ಸುಂದರವಾದ ಅಕ್ಷರಗಳ ಈ ಶಿಲಾಫಲಕ ನೇಗಿಲು ಹೊಡೆಯುವಾಗ ನೆಲದಲ್ಲಿ ಸಿಕ್ಕಿರುವುದರಿಂದ ಆ ಭಾಗದಲ್ಲಿ ದಿಬ್ಬವೂ ಇರುವುದರಿಂದ ಬಹುಶಃ ಶಾಸನದಲ್ಲಿ ವರ್ಣಿತವಾದ ಲೋಕಾದೇವಿ ಬಸದಿಯು ಇಲ್ಲಿಯೇ ಹುದುಗಿರಬಹುದಾದ ಸಾಧ್ಯತೆಯಿದೆ. ಶಾಸನದ ಪೂರ್ಣಪಾಠ ಕೆಳಗಿನಂತಿದೆ–

೧. ನ್ರಿರ್ದ್ದುಮರಾರುಜ ನಿರ್ಬ್ಭಯ ಸುಭಿಕ್ಷ ನಿತ್ಯೋತ್ಸವೋ ಭವತು ದೋಶರಾಜೋ ಶ್ರೀ ಧರ್ಮ್ಮ ನಿರತಃ ಪ್ರಮುದಿತ ಚಿತ್ತಶ್ಚಿರಂ ಜಯತು ॥

೨. ಶ್ರೀ ಸ್ವಸ್ತಿ ಸಮಧಿಗತ ಪಞ್ಚ ಮಹಾಶಬ್ದ ಮಹಾಮಣ್ಡಳೇಶ್ವರಂ ಬನವಾಸೀ ಪುರವರೇಶ್ವರಂ ತ್ರಿಲೋಚನ ಕದಂಬ ಕುಳಕವಳಿನೀ ಏಕಾಸ ಭಾಸ್ಕ

೩. ರನನೇಕ ಸಮರ ವಿಜಯೋಪಾರ್ಜ್ಜಿತ ವೀರ ಶ್ರೀನಿವಾಸ ದಕ್ಷಿಣ ದೋರ್ದ್ದಣ್ಡ ಪಗೆಮುಟ್ಟೆ ಗಣ್ಡ ಗಣ್ಡ ಪ್ರಚಣ್ಡ ವೈರಿ ಮಣ್ಡಳಿಕ ಮದವೇದಣ್ಡ ಗಂಡಸ್ಥಳಖಣ್ಡನ ಪಳಿದು ನಿಷ್ಠುರ ಭುಜದ

೪. ಣ್ಡನನೂನ ದಾನವಾರಿ ಸನ್ತರ್ಪ್ಪಿತ ಸಕಳ ವಿಬುಧ ಜನಸಸ್ಯ ಲೋಕೈಕ ಕಳ್ಪದ್ರುಮಂ ಸಂಕ್ರಾನ್ತಿಧವಳಂ ಮೂರ್ತ್ತಿನಾರಾ[ಯ*]ಣಂ ಕೀರ್ತ್ತಿಮಾರ್ತ್ತಣ್ಡಂ ಮಣ್ಡಳಿಕ ಲಲಾಟಪಟ್ಟ ಶ್ರೀ

೫. ಮಚಟ್ಟಯ್ಯದೇವ ॥ ತತುಸುತ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಬನವಾಸೀ ಪುರವರಾಧೀಶ್ವರಂ ಸಮಸ್ತ ಭುವನ ಸಂಸ್ತೂಯಮಾನ

೬. ಹರಧರಣೀ ಪ್ರಸೂತ ತ್ರಿಲೋಚನ ಕದಂಬವಂಶ ಮಹೋದಯ ಮಹೀಧರೇಂದ್ರಂ ಶಿಖರಾಭ್ಯುದಯಮಾನ ಮಹಾಪ್ರಚಣ್ಡ ಮಾರ್ತ್ತಣ್ಡ ಮಾರ್ತ್ತಣ್ಡಕರಾ

೭. ತೀ ತೀಬ್ರ ನಿಜಪ್ರತಾಪ ವಶೀಕ್ರಿತ ಸಕಳ ಮಹೀಮಣ್ಡಳ ಮೃಗ ಸಿಂಹಲಾಞ್ಛನಂ ವಾನರಮಹಾಧ್ವಜಂ ಪೆರ್ಮ್ಮಟ್ಟಿ ತೂರ್ಯ್ಯ ನಿರ್ಘ್ಘೋಶಣ ಚತುರಾಸೀತಿ ನಗರಾಧಿಷ್ಠಿತಾ

೮. ಷ್ಟಾದಶಾಶ್ವಮೇಧ ದೀಕ್ಷಾದೀಕ್ಷಿತ ಕುಳಪ್ರಸೂತ ಹಿಮವದು ಗಿರೀಂದ್ರ ರುಂದ್ರ ಶಿಖರಾಸ್ಥಾಪಿತ ಮಹಾಶಕ್ತಿ ಪ್ರಭಾವತ್ಯಾಗ ಜಗ ಝಂಪ ಝಂಪಳಾಚಾರ್ಯ್ಯ ನಿಶ್ಶಂಕ

೯. ರಾಮಂ ಸುಭಟ ಕನಕ ನಿಕಷೋಪಳ ಶರಣಾಗತ ವಜ್ರಪ್ರಾಕಾರ ಲೋಕೈಕ ಕಳ್ಪದ್ರುಮಂ ಸಂಕ್ರಾನ್ತಿ ಧವಳಂ ಮೂರ್ತ್ತಿನಾರಾಯಣಂ ಕೀರ್ತ್ತಿ ಮಾರ್ತ್ತಣ್ಡಂ ಮಣ್ಡಳಿಕ

೧೦. ಲಲಾಟಪಟ್ಟ ಶ್ರೀಮಜ್ಜಯಕೇಸಿದೇವ । ತತುಪುತ್ರ ಸಮಧಿಗತ ಪಞ್ಚಮಹಾಶಬ್ದ ಮಹಾಮಣ್ಡಳೇಶ್ವರಂ ಬನವಾಸೀ ಪುರವರಾಧೀಶ್ವರಂ ಸಮಸ್ತ ಭುವನ ಸಂಸ್ತೂ

೧೧. ಯಮಾನ ಹರಧರಣೀ ಪ್ರಸೂತ ತ್ರಿಲೋಚನ ಕದಂಬ ವಂಶ ಮಹೋದಯ ಮಹೀಧರೇನ್ದ್ರ ಶಿಖರಾಭ್ಯುದಯಮಾನ ಮಹಾಪ್ರಚಣ್ಡ ಮಾರ್ತ್ತಣ್ಡ ಮಾರ್ತ್ತಣ್ಡ ಕ

೧೨. ರಾತೀ ತೀಬ್ರ ನಿಜಪ್ರತಾಪ ವಶೀಕ್ರಿತ ಸಕಳ ಮಹೀಮಣ್ಡಳನುತ್ತುಂಗ ಸಿಂಹಲಾಂಛನ ವಾನರಮಹಾಧ್ವಜಂ ಪೆರ್ಮ್ಮಟ್ಟಿ ತೂರ್ಯ್ಯ ನಿರ್ಘ್ಘೋಶಣಂ ಚತುರಾಶೀತಿ । ನವ

೧೩. ಗರಾಧಿಷ್ಠಿತಾಷ್ಟಾದಶಾಶ್ವಮೇಧ ದೀಕ್ಷಾದೀಕ್ಷಿತ ಕುಳಪ್ರಸೂತ ಹಿಮವದ್ಗಿರೀನ್ದ್ರ ರುನ್ದ್ರ ಶಿಖರಾಸ್ಥಾಪಿತ ಮಹಾಶಕ್ತಿ ಪ್ರಭಾವ ತ್ಯಾಗ ಜಗಝಂಪ ಝಂ

೧೪. ಪಳಾಚಾರ್ಯ್ಯ ನಿಶ್ಶಂಕರಾಮ ಶುಭಟಕನ[ಕ] ನಿಕಷೋಪಳ ಶರಣಾಗತ ವಜ್ರಪ್ರಾಕಾರ ಲೋಕೈಕ ಕಳ್ಪದ್ರುಮಂ ಶಂಕ್ರಾನ್ತಿಧವಳಂ ಮೂರ್ತ್ತಿನಾರಾಯಣಂ ಕೀರ್ತ್ತಿ

೧೫. ಮಾರ್ತ್ತಣ್ಡಂ ಮಾರ್ತ್ತಣ್ಡಂ ಮಣ್ಡಳಿಕ ಲಲಾಟಪಟ್ಟಂ ವೈರಿಘರಟ್ಟಂ ಸುಭಟರಾಜ ಸಿಖಾಮಣಿ ಕಾದಂಬ ಚೂಡಾಮಣಿ ಇತ್ಯಖಿಳ ರಾಜಾವಳೀ ವಿರಾಜಿತರಪ್ಪ ಶ್ರೀಮತ್ರಿ

೧೬. ಭುವನಮಲ್ಲ ಗೂವಲದೇವ॥ ಶ್ರೀ ಶ್ರೀ ನಿಜರಾಜಧಾನಿ ಶ್ರೀಚನ್ದ್ರಾಪುರದೊಳ್ಕೊಂ ಕಣವೊಂಭಯ್ಯೂಱು ಪಲಸಿಗೆ ಪನ್ನಿರ್ಚ್ಛಾಸಿರ ಮುಕುನ್ದೂರಯ್ಯೂಱುಣ್ಕಲ್ಲ

೧೭. ಬ್ಬಿಯೆರಡು ಮೂವತ್ತು ಹೈವೆಯಯ್ಯೂಱುತ್ತುಗ್ರಾಮೆ ಕಾದರವಳ್ಳಿಯೆರಡು ಮೂವತ್ತು ಕೊನ್ತಕುಳಿ ಮೂವತ್ತು ಪಾನುಗಲ್ಲಯ್ಯೂಱು ವೇಳ್ಗ್ರಾಮೆಯೆಬ್ಬಿ

೧೮. ತ್ತು ಪೊಳಲ್ಗುನ್ದ ಮೂವತ್ತುಮಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿಂ ದುತ್ತರೋತ್ತರಾಭಿವ್ರಿದ್ಧಿ ಪ್ರವರ್ಧ್ಧಮಾನ ಮಾಚಂದ್ರಾರ್ಕ್ಕತಾರಂ ಸುಖ ಸಂಕಥಾ ವಿನೋದದಿಂ ವಿಜ

೧೯. ಯರಾಜ್ಯ ಸಲುತ್ತಮಿರೆ ಸಕಭೂಪಾಳ ಕಾಳಾಭ್ಯುದಯ ಸಂವತ್ಸರ ೧೦೦೨ನೆಯ ರೌದ್ರ ಸಂವತ್ಸರದ ಪುಶ್ಯ ಸುದ್ಧ[ದ*] ಸಮಿ ಗುರುವಾರದನ್ದುತ್ತರಾಯಣ

೨೦. ಸಂಕ್ರಾನ್ತಿಯಾಗೆ ತತ್ಪುಣ್ಯದಿನದೊಳೆ ಪ್ರಭಾ(ಧಾ)ನರ ಪ್ರತ್ಯಯದೆ ಪುರೋಹಿತ ಮಾಧವಭಟ್ಟರ ಪ್ರಮುಖ ಬ್ರಹ್ಮಸಭೆಯ ನಾನಾದೇಸಿಯ ಪಣ್ಡಿತರ

೨೧. ಸನ್ನಿಧಿಯೊಳೆ ಶ್ರೀಮಜ್ಜಯಕೇಸಿದೇವರ ಪಟ್ಟಮಹಾದೇವಿಯಾಚಲದೇವಿಯರಬ್ಬೆ ನಿಗುಂಬರ ಬಿಜ್ಜರಸನರಸಿ ಲೋಕಬ್ಬರಸಿಯರ್ಮ್ಮರಜ

೨೨. ವಾಡಿನಾಡ ಕಂಪಣಂ ಪುಲ್ಲಂಬಿಯ ಬಳಿಯಗ್ರಹಾರಂ ಮಣಿಗುಂದಗೆಯೊಳ್ಗೆ ಮಾಡಿಸಿದ ಬಸದಿಗೆ ಪೂಜೆಪುನಸ್ಕಾರಾರ್ಥವಾ ನಾಡ ಕಂ

೨೩. ಪಣ ಮುಗುನ್ದದ ಬಳಿಯ ಬಾಡ ನಿಗುನ್ದೆಯ ಸಿದ್ಧಾಯದೊಳಗೆ ಭೈರವನಯ್ದು ಗದ್ಯಾಣಮನಿಳಿಪಿಯಾ ಪೊಂಗೆ ತಕ್ಕ

೨೪. ನಿತು ಭೂಮಿಯ ಸರ್ವ್ವನಮಸ್ಯಂ ಸರ್ವ್ವಬಾಧಾ ಪರಿಹಾರಮಾಚನ್ದ್ರಾರ್ಕ್ಕ ತಾರಂ ಸಾಸನಮಾಹಿ ಕೊಟ್ಟೆವುಂ ॥ ದೇವದಾಸಿ ಬರೆಪ ॥

೨೫. ಪೂಲಿಯಕೆಱೆಯುಂ ಅದಱ ಕೆಳಗಣ ಗಟ್ಟ್ದೆಯು ಮೂಡಣ ಕೋಡಿಯ ತೆಂಕಣ ಗಡಿಯ ಗಟ್ಟ್ದೆಯ ಒರ್ಮ್ಮನಕೆಯಿಂ ಬಡ

೨೬. ಗಣ ಸೀಮೆಯ ಆಕೆಯಿಂ ಪಡುವಣ ಪಳಗಲುಮಂ ಒನ್ದು ಮನೆಯ ನಿವೇಶಣಮುಮಂ ದಾಯಿಮಯ್ಯಸೆಟ್ಟಿಯರ್

೨೭. ಲೋಕಿಯಬ್ಬರಸಿಯರ ಬಸದಿಗೆ ಕೊಟ್ಟುದರ್ಕ್ಕೆ ಬಾಡದ ನಾಮಗಾವುಣ್ಡನಳಿಕವಾಳದ ಭಾವಗಾವುಣ್ಡ ಹುಪ್ಪವಳ್ಳಿಯ

೨೮. ಸೂರಗಾವುಣ್ಡಂ ಮಣಿಗುನ್ದಗೆಯ ಮಾದಿಗಾವುಣ್ಡಂ ಮಾಲಗಾಱ ನಾಕಿಮಯ್ಯಂ ಇವರ ಸನ್ನಿಧಿಯೊಳೆ ಕೊಟ್ಟನಾತನ

೨೯. ವಂಶಕ್ಕ ಮುತ್ತರೋತ್ತರಾಭಿವೃದ್ಧಿಯಕ್ಕೆ ಸನ್ತಿ ಶುಭಮಕ್ಕೆ ॥ ಶ್ರೀ ಮಮ[ಳ] ಚರಿತನೆನಿಪ ಕೇತಾರ್ಯ್ಯನಾಚಾರ್ಯ್ಯಯೆನಿಪ್ಪ ಕಾಳಿಕಾಂಬಿಕೆಯನ್ತಾವನಿ

೩೦. ತಾರತ್ನದ ಬಸುಱೊಳೆ ಜನಿಯಿಸಿದ ನಾರಣಾರ್ಯ್ಯನೂರ್ಜ್ಜಿತ ಪುಣ್ಯ ॥ ವಿಪ್ರಕುಳತಿಳಕನಮಳ ಯಶಪ್ರಿಯನಭಿಮಾನದಾನಿ ಸುಜನಂ ಸದ್ವಿದ್ಯಾಪ್ರಿಯ

೩೧. ನೆನ್ದತಿ ಮುದದೆ ಬುಧಪ್ರಕರಂ ಪೊಗಳೆ ನಾರಣಾರ್ಯ್ಯಂ ನೆಗಟ್ದ ॥ ಗುಣದ ಕಣಿಯೆನಿಪ ಸುಜನಾಗ್ರಣಿ ನಾರಾಯಣನಗಣ್ಯ ಪುಣ್ಯಮಿದೆಂಬೊನ್ದೆಣಿಕೆಯಿನಿತ್ತಂ

೩೨. ಬಸದಿಗೆ ಮಣಿಗುನ್ದಗೆಯಱೆಯೆ ಭೂಮಿದಾನಮನದಱೊಳೆ ಪರಹಿತದಾಶ್ರಯನ್ದಯೆಯ ತಾಯ್ಮನೆ ಧರ್ಮ್ಮದ ಬಿತ್ತು ಸತ್ಯದಹರಮೊಳ್ಪಿಂಗೆ ಮೊತ್ತಮೊದಲೆಂಬ

೩೩. ಪೊಗರ್ತೆಯ ನಾರಣಾರ್ಯ್ಯಸಾದರದೊಳೆ ತನ್ನ ಕೀರ್ತ್ತಿ ಬೆಳ್ಗಲ್ಲುಜನಾಗ್ರಣಿಯಿತ್ತನುತ್ತರೋತ್ತರಮೆನೆ ಸಸ್ದ ಬಳ್ಳಿಗೆಱೆ ಗಟ್ಟಿಯ ಭೂಮಿಯನೊನ್ದು ತೋಂಟಮಂ॥

೩೪. ಸ್ವಸ್ತಿ ಸಕವರ್ಷ ೧೦೧೦ನೆಯ ವಿ[ಭ*]ವ ಸಂವತ್ಸರದ ಪೌಶ್ಯಸುದ್ಧ ನವಮಿಯಾದಿ ವಾರದೊಳುತ್ತರಾಯಣ ಸಂಕ್ರಾನ್ತಿಯ ಪುಣ್ಯದಿನದೊಳೆ ಮಚಿಗೆಯ ಕೀರ್ತ್ತಿ

೩೫. ಮಾರ್ತ್ತಣ್ಡ ಜಿನಾಲಯದಾಚಾರ್ಯ್ಯ ಮುನಿಚಂದ್ರ ಸಿದ್ಧಾನ್ತಿಗರ ಪಾದಪ್ರಕ್ಷಾಳನದಿ ಧಾರಾಪೂರ್ವ್ವಕಂ ಮಾಗಿ ಶ್ರೀಮದ್ಯಾಪನೀಯ ಸಂಘ

೩೬. ದ ಕುಮ್ಮುಡಿಗಣದ ಮಣಿಗುನ್ದಗೆಯ ಲೋಕಾದೇವಿಯ ಬಸದಿಯ ದೇವರಷ್ಟ ವಿಧಾರ್ಚ್ಚನಕಮಲ್ಲಿಯ ತಪೋಧನರಾಹಾರದಾನಕ್ಕುಂ ಬಳ್ಳಿಗೆಜಿ

೩೭. ಯ ಕೆಳಗಣ ಗರ್ದ್ದೆಯುಂ ಪಳೆಗಲುಮಂ ಪಿರಿಯಕೆಜಿಯ ಮೂಡಲ ಪರಿಯ ಮುನ್ನಿನ ತೋಂಟಮುಮನ್ದಾನ ಸಾಲೆಯ ಮನೆವೊಂದು....

೩೮. ರಯ್ದು ಮನೆಯ ನೆಲಸಣಮುಮಂ ಶ್ರೀಮತ್ಕುನ್ದೂರ್ನ್ನಾಡ ಸೇನಬೋವರ್ಮ್ಮಣಿಗುನ್ದಗೆ ಯೂರೊಡೆಯನ್ನಾರಣಯ್ಯ ನಾಯಕಂ ಸರ್ವ್ವನಮಸ್ಯ

೩೯. ಮಾಗಿ ತನ್ನದಾನಮಾಚನ್ದ್ರಾರ್ಕ್ಕ ತಾರಂಬರಂ ಸಲುವನ್ತಾಗಿ ಕೊಟ್ಟೆವೂ ಮಂಗಳ ಮಹಾ ಶ್ರೀ ಶ್ರೀ ಶ್ರೀಸಾಮಾನ್ಯೋಯಂ ಧರ್ಮ್ಮಂಶೇತುರ್ನ್ನ್ರಿ ಪಾಣಾಂ ಕಾಳೇ ಕಾಳೇ (ಪಾಳನಿ)

೪೦. ಯೋನ್ಭವದ್ಭಿಃ ಸರ್ವ್ವಾನೇತಾನುಭಾವಿನ ಪಾರ್ತ್ಥಿವೇಂದ್ರಾನು ಭೂಯೋ ಭೂಯೋ ಯಾಚತೇ ರಾಮಚಂದ್ರಂ ॥ ಬಹುಭಿರ್ವ್ವಸುಧಾ ದತ್ತಾ ರಾಜಭಿರ್ಸ್ಸಗರಾದಿಭಿರ್ಸ್ಸಗರಾದಿಧಿಃ ಯಸ್ಯ ಯಸ್ಯ ಯದಾ ಭೂಮಿ

೪೧. ಸ್ತಸ್ಯ ತಸ್ಯ ತದಾಫಳಂ ॥ ಮದ್ವಂಶಜಾಜ್ಜಿರಮಹೀಪತಿ ವಂಸಜಾ ವಾ ಪಾಪಾದಪೇತ ಮನಸೋ ಭುವಿ ಭಾವಿ ಭೂಪಾಃ ಯೇ ಪಾಳಯನ್ತಿ ಮಮ ಧರ್ಮ್ಮಮಿದಂ ಸಮಸ್ತಂ

೪೨. ಯೇ ವಿರಚಿತಾಂಜಲಿರೇಷ ಮೂರ್ದ್ಧ್ನಿ ॥ ಸ್ವದತ್ತಂ ಪರದತ್ತಂ ವಾಯೋಹರೇತಿ ವಸುಂಧರಾ ಶಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ ॥ ಶ್ರೀಮತು ವರ್ದ್ಧಮಾನ ಜಿನೇಂದ್ರ

೪೩. ಕರ ಕೀರ್ತ್ತಿ ಪ್ರವರ್ತ್ತಿಸುತ್ತಮಿರೆ ॥ ತಚ್ಛಿಷ್ಯ ಸುಧರ್ಮ್ಮಸ್ವಾಮಿ ಗಣಧರ ದೇವರಾನ್ವಯದೊಳಂ ಕುಮುಡಿಗಣ ಭೂವಳಯದೊಳೆಸೆದುದು ಜಗತೀ ವಿನೂತ ಯಾಪನೀಯ ಸಂಘಂ (ಪ್ರಭು)

೪೪. ಸನ್ತತಿಯೊಳೆ । ಬುದ್ದಿ ಶ್ರೀ ಕೀರ್ತ್ತಿ ಗೊರವಡಿಗಳೆ ಜಗತ್ಪ್ರಸಿದ್ಧರು ಲೋಕಗುರುಗಳೆಮಾಗೆ ತಚ್ಛಿಷ್ಯ ಸನ್ತತಿ ಪ್ರಭಾಚಂದ್ರದೇವರುಂ ನರೇಂದ್ರ ಕೀರ್ತ್ತಿಸಿದ್ಧಾನ್ತಸ್ವಾಮಿಗಳ್ । ಅವರ ಸಿ

೪೫. ರುಂ ಚಾರಿತ್ರ ಚಕ್ರವರ್ತ್ತಿಗಳ್ ನಾಗವೀರಸ್ವಾಮಿಗಳ್ ನಿರವದ್ಯ ದೇವರುಂ ಸುಭಚಂದ್ರದೇವರುಂ ರಾಮಚಂದ್ರದೇವರುಂ । ಗೋವರ್ದ್ಧನ ತ್ರೈವಿದ್ಯದೇವರುಂ ಸಾಸ್ತ್ರದೊಳಂ ತಪದೊಳಂ ದಾನದೊಳಂ.

೪೬. ಜಗಪ್ರಸಿದ್ಧರುಂ । ಭುವನ ವಂದ್ಯರುಂ ಮಾದರವರ ಸಿಷ್ಯರು ಸಮಸ್ತ ರಾಜ ನಿಕುರುಂಬ ಮಕುಟತಟಘಟಿತ ಪಾದಾರವಿಂದರುಂ ಶ್ರೀಮಚಟ್ಟಯ್ಯದೇವ ಮನಸ್ಸರೋಜನೀರಾ

೪೭. ಜಹಂಸರು ಸಕಳಜನಾನನ್ದರುಂ ವಿಶ್ವಲೋಕವಶಂಶರಗಳೇಂ ಜಿನಮಂದಿರೋದ್ಧರಣ ಕರಣ ಪರಿಣತರುಂ ಶಬ್ದಾನುಸಾಸನಾಂಬೋಧಿ ಪಾರಗರುಂ ಚತುಸ್ಸಮೆಯ ಸಮುದಿತ

೪೮. ಯುಕ್ತಚಿತ್ತರುಂ ಕುಮುಡಿಗಣ ಕುಳತಿಳಕರುಂ ಪರಮಕಾರುಣ್ಯ ದಾನಿಗಳೆಮಪ್ಪ ಶ್ರೀಮದನನ್ತವೀರ್ಯ ಪಣ್ಡಿತರುಂ ॥ ಶ್ರೀ ದೀನನಾ ನಮ್ರ ಜಗತ್ರಯಾಧಿಪನ ವಿಶಂ ರಾಮ

೪೯. ಚಂದ್ರ ಬ್ರತೀಶನಜೇಯಂ ಗುರುಜೈನಧರ್ಮ್ಮಮನಘಂ ಧರ್ಮ್ಮಸ್ವ ವಂಶಂ ಜಗಜ್ಜನಂ ಸಂಪೂಜಿತ ಸೋಮವಂಶಮೆನಲುರ್ವ್ವೀ ಮಾನ್ಯ ಕಾದಂಬಭೂಪ ನಿಕಾಯಸ್ತುತೆ ಲೋಕಿಬ್ಬರಸಿಯ[ಂತಾ*]

೫೦. ರ್ದ್ದನ್ಯರೀ ಧಾತ್ರಿಯೊಳೆ ॥ ಮುಂಬಿದಿತಾಂ ಜಗಜ್ಜನಕತಾಕ್ಷಣದೊಳೆಕ್ಷತ ಕೌಶಲಂ ಗುಣಾಲಂಬನಹಿನ ವಿಶ್ವವನಿತಾಜನಮಂ ಪಡೆದೆಂ ನಿಕ್ರಿಷ್ವಮಾಯ್ತೆಂಬ ಬು....

೫೧. ರ್ಣ ನಿಜಕೌಶಲಮಾವಗಮೊಪ್ಪಿ ತೋಱಿ ಲೋಕಾಂಬಿಕೆಯ ಸಮಗ್ರ ಗುಣ ಸರ್ವ್ವದೇಯಂ ಪಡೆದಂ ಪಿತಾಮಹಂ ॥ ರೇವತಿಯ ತತ್ವರುಚಿವಾಗ್ದೇವಿಯ ರುಗ್ಮಿಣಿ....

೫೨. ವ್ಯ ರೋಹಿಣಿಯ ಜಗತ್ಪಾವನ ಚರಿತಂ ಸಾಸನದೇವಿ ಸಮೆಯೆನಿಪ ಲೋಕದೇವಿವೊಳೆಸದುಂ ॥ ದಾನಮೆ ವಿನೋದಮೆಸಭಿಮಾನಮೆ ತನಗಮರ್ದ್ದಮೆ....

೫೩. ದಱನೆ ಸಮಾಧಾನಕರಮುಚಿತವಚನಮೆನೆ ಪುಣ್ಣ್ಯಯುವತಿ ಲೋಕಾದೇವಿ ॥ ಭೂವಿದಿತ ಕದಂಬಾನ್ವಯ ದೇವನ ಜಯಕೇಸಿ ಭೂಮಿಪನ ಪಟ್ಟಮಹಾದೇವಿಯೀ ಸಂ....

೫೪. ವೀ ಜಿನೇಶ್ವರ ನಿವಾಸಮಂ ವಿರಚಿಸಿದಳ್ ॥ ಅಂಬುಜನಯನೆ ನಿಗುಂಬ ಕುಳಾಂಬರ ವಿದ್ಯಾರೇಚರಾಜ ಜನನಿ ಲಸತ್ಕಾದಂಬ ನ್ರಿಪರೆಸವಿನಂ ಲೋಕಾಂಬಿಕೆ ಮಾಡಿಸಿದಳ್....

೫೫. ಮಂದಿರಮಂ ॥ ಎದೆಗೊಣ್ಡು ಸಾವಿಳಾಪಾವಳೆಯಮನುಱದತ್ಯದ್ಭುತಾಕಾರದಿಂದಂ ಕಾಯ್ವಡದ್ದೊಕಾಸಕ್ಕೆತ್ಯಂ ತಿಟ್ಟುವೊಲಹಿತ ಮಹೀಪಾಳ ವಿಧ್ವಂಸಿಯೆಂಬ...

೫೬. ಗತ್ತು ಜಗಳೆನಮಗೆನೆ ರಿಪುಭೂಪಾಳರಂ ಮುನ್ದೆ ವನ್ದೊಗಡೆ ಬಾಹುಗರ್ಬ್ಬದಿಂಬಂ ತುಳಿದು ತವಿಪುಗುಂ ಗೊಮ್ಮಭೂಪಾಳದೇವ ಸ್ವಸ್ತಿ ಯಮನಿಯಮ ಸ್ವಾಧ್ಯಾ

೫೭. ಯ ಧ್ಯಾನಧಾರಣ ಮೋನಾನುಷ್ಠಾಣ ಜಪಸಮಾಧಿ ಸೀಳಸಮ್ಪನ್ನರಪ್ಪ ಶ್ರೀಮತು ದಾವಣಂದಿ ಭಟ್ಟರಕರ ಅವರ ಶಿಷ್ಯರಪ್ಪ ನಾಗವೀರದೇವರು ಕವಿಕೀ....

೫೮. ತಮ್ಮಡಿಗಳ್ ಬಸದಿಯ ಮಾಡಿಸಿದ ವೊಡೆಯರು । ದೇವಸಿರಿ ಕನ್ತಿಯರುಮಪ್ಪ ಶ್ರೀಕನ್ತಿಯರು । ಚಾರುಮತಿಯಬ್ಬೆ ಜಿನಮತಿಯಬ್ಬೆ । ರಾಮಚಂದ್ರ

೫೯. ದೇವರ ಗುಡ್ಡಂ ಭೀಮಣ್ಣನ ಬರೆಪ ಮಂಗಳ । ಬುಂಥೀಬನ ಬಡಗಿ ಕೇತೋಜನ ಖಂ[ಡ*]ರಣೆ ಮಂಗಳ ಮಹಾ ಶ್ರೀ ಶ್ರೀ ಶ್ರೀ

❑

# ಕನಕದಾಸರ ಒಂದು ಕೀರ್ತನೆಯಲ್ಲಿ ಅನುಭಾವದ ನೆಲೆ

• ಎನ್. ಸುರೇಶ್ ನಾಗಲಮಡಿಕೆ



ನಾವು ಕುರುಬರು, ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ

ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು
ದೃಷ್ಟಿ ಜೀವಾತ್ಮನೆಂತೆಂಬ ಆಡು
ಸೃಷ್ಟಿ ಸಿದ್ದ ಪ್ರಸಿದ್ಧವೆಂತೆಂಬ ಹೋತಗಳು
ಕಟ್ಟಿ ಕೋಲಿನಲಿ ಇರಿಯುತಿಹ ನಮ್ಮಜ್ಜ

ವೇದ ಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು
ಕಾದಿದ್ದು ನಮ್ಮಜ್ಜಧನ ಹಿಂಡೊಳಗೆ
ಹಾದಿಗಾಣದೆ ಕೂಗಿ ಬಾಯಾರಿ ಕಾಲ್ಗೆಡಲು
ಆದರಿಸಿ ಅಂಬಲಿಯ ನೆರೆವ ನಮ್ಮಜ್ಜ

ಅರಿವೆಂಬ ಮರಿಗಳು ಹಿಂಡಿನೊಳಗಡೆ ಬರಲು
ಮರೆವೆಂಬ ವ್ಯಾಘ್ರ ಕಿರುಬ ತೋಳಗಳು ಹೊಕ್ಕು
ತರುಬಿ ಹಿಂಜಾವದಲಿ ಕುರಿಯ ಮುರಿದವು ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ

ಹುಟ್ಟುವದಕೆ ಮೊದಲಿಲ್ಲ ಸಾವುದಕೆ ಕೊನೆಯಿಲ್ಲ
ಹುಟ್ಟುಸಾವಿನ ಹೊಲಬ ಬಲ್ಲ ನಮ್ಮಜ್ಜ
ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ
ಹೊಟ್ಟೆ ತುಂಬುವ ಹಾಗೆ ಎರೆವ ನಮ್ಮಜ್ಜ

ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ
ಕಲಿಯುಗಂಗಳನೆಲ್ಲ ಪೊರೆವಾತನೀತ
ಜಲಜಾಕ್ಷ ಕಾಗಿನೆಲೆಯಾದಿಕೇಶವನ ಮನ
ವೊಲಿಸಿ ಭಜಿಸಿದ ಮನುಜ ಹುಚ್ಚು ಕುರುಬ

–ಕನಕದಾಸರು

ಕನಕದಾಸರ ಈ ಕೀರ್ತನೆ ಬಹಳ ಬೇಗ ತನ್ನ ಅರ್ಥವನ್ನು ಬಿಟ್ಟುಕೊಡುವುದಿಲ್ಲ. ಮೇಲು ನೋಟಕ್ಕೆ ಆಧ್ಯಾತ್ಮ ಎಂದೆನಿಸಿದರೂ, ಆಳದಲ್ಲಿ ಸಮಾಜ, ಸಂಸ್ಕೃತಿ, ಪುರಾಣ, ಮತ್ತು ಅನುಭಾವಿಕ ಪರಿಭಾಷೆಯೂ ಆವರಿಸಿಕೊಂಡಿರುವುದು ಗಮನಿಸಬಹುದು. ಕನಕದಾಸರು ಪ್ರತಿಯೊಂದು ಶಬ್ದವನ್ನು ಪ್ರಜ್ಞಾಪೂರ್ವಕವಾಗಿ ಬಳಸುವುದು ನೋಡಿದರೆ ಅವರು ಬೌದ್ಧಿಕವಾಗಿ ಪಕ್ವಗೊಂಡ ನಂತರವೇ ಈ ಕೃತಿ ರಚನೆಯಾಗಿರಬೇಕು.

"ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ"

ಇಲ್ಲಿ ಒಂದು ಸಮುದಾಯದ ಮುಖೇನ ಹಾಗೂ ಅದರ ಪ್ರಧಾನ ವೃತ್ತಿಯ ಮೂಲಕ ಇಡೀ ಮಾನವನ ಬದುಕು ಗರ್ಭೀಕರಿಸಿಕೊಂಡಿರುವ ಆಯಾಮಗಳನ್ನು ಬಿಚ್ಚಿಡುತ್ತಾ ಸಾಗುವುದನ್ನು ನೋಡಬಹುದು. ಬೀರಯ್ಯ ಕುರುಬರ ಆರಾಧ್ಯ ದೈವ, ಕುರಿಗಳು ಇದರಲ್ಲಿ ಪ್ರಧಾನ ಭೂಮಿಕೆಯನ್ನು ವಹಿಸಿವೆ. ಅವುಗಳನ್ನು ಕಾಯುವ ಅಜ್ಜ, ಕುರಿಗಳ ಮಹತ್ವ ಮತ್ತು ಅವುಗಳ ಮುಖಾಂತರ ನಿಗೂಢ ಜಗತ್ತೊಂದನ್ನು ಅನಾವರಣಗೊಳಿಸುತ್ತಾರೆ.

ಟಗರು, ಆಡು, ಹೋತಗಳಿರುವ ಆ ಹಿಂಡಿನಲ್ಲಿ ಪ್ರತಿಯೊಂದಕ್ಕೂ ವಿಶಿಷ್ಟ ಮಹತ್ವವಿರುವುದನ್ನು ಕಾಣುತ್ತೇವೆ. ಕುರಿ ಕಾಯುವ ಕಾಯಕದಲ್ಲೇ ಅನುಭಾವಿಯ ಮಾರ್ಗದಲ್ಲಿ ಕಾವ್ಯವನ್ನು ಕಟ್ಟಿದವರಲ್ಲಿ ಕನಕದಾಸರು ಮೊದಲಿಗರಲ್ಲ. ವಚನಕಾರ ವೀರಗೊಲ್ಲಾಳ ಮೊದಲಿಗ. ಪ್ರಾಣಿ ಪ್ರಪಂಚದ ಮುಖಾಮುಖಿಯನ್ನೂ ಕೂಡ ಇಲ್ಲಿ ಆಸಕ್ತಿಯಿಂದ ಗಮನಿಸಬೇಕು.

ಅಷ್ಟಮದ ಮತ್ಸರಗಳನ್ನು [ಧನ, ರೂಪ, ಯೌವನ, ಕುಲ, ಬಲ, ರಾಜ್ಯ, ತಪ] ಕನಕದಾಸರು ಯಾಕೆ ಟಗರುಗಳಿಗೆ ಹೋಲಿಸಿದ್ದಾರೆ? ಎಂಬ ಪ್ರಶ್ನೆ ಕಾಡುತ್ತದೆ. ಟಗರು ಕುರಿಗಳ ಹಿಂಡಿನಲ್ಲಿ ರಾಜನಂತೆ ಮೆರೆಯುವ ಪ್ರಾಣಿ. ಮತ್ತು ವೀರ್ಯವತ್ತಾದ ಪ್ರಾಣಿ. ಅದಕ್ಕೆ ಮುಪ್ಪು ಬರುವವರೆಗೂ ದೌರ್ಜನ್ಯ ಮಾಡುತ್ತಲೇ ಇರುತ್ತದೆ. ಪ್ರಾಯಃ ಆ ಮನುಷ್ಯನ ಬದುಕಿನಲ್ಲಿಯೂ ಎಲ್ಲವೂ ಕ್ಷಣಿಕ ಎಂಬುದನ್ನು ಸಾರುತ್ತಲೇ ಟಗರಿನ ಮುಖೇನ ಸಾಮಾಜಿಕ ಕ್ರೌರ್ಯಗಳನ್ನು ಕನಕದಾಸರು ಅನಾವರಣಮಾಡುತ್ತಿರಬಹುದೆ? ಇದೇ ಸಮೂಹದಲ್ಲಿರುವ 'ಆಡು' ಸಾಧು ಪ್ರಾಣಿ. ದೃಷ್ಟಿ ಮತ್ತು ಜೀವಾತ್ಮಕ್ಕೆ ಸರಿಸಾಟಿಯಾಗಿ ನಿಲ್ಲಿಸಿರುವುದು ಔಚಿತ್ಯಪೂರ್ಣವಾಗಿದೆ. ದೃಷ್ಟಿ ಎನ್ನುವುದಕ್ಕೆ ಇಲ್ಲಿ ದರ್ಶನ ಕಾಣ್ಕೆ ಎಂಬ ಅರ್ಥ ಪ್ರಾಪ್ತಿಯಾಗುತ್ತದೆ. ಜೀವ+ಆತ್ಮ ಈ ಪರಿಭಾಷೆ ಭಾರತೀಯ ತತ್ವ ಪರಂಪರೆಯಲ್ಲಿ ಈಗಲೂ ಚರ್ಚೆಯಾಗುತ್ತಲಿದೆ. ಹಾಗೂ ಕಾಡುತ್ತಿರುವ ಪರಿಕಲ್ಪನೆಯೂ ಆಗಿದೆ. ಜೀವ-ಉಸಿರು, ಆಡುವಿಗೆ ಉಸಿರು ನೀಡುವ ಸಾಮರ್ಥ್ಯವಿದೆ. ಆತ್ಮಕ್ಕೆ ವಿವಿಧ ಧಾರ್ಮಿಕ ಕಲ್ಪನಾತ್ಮಕ ಪ್ರಕ್ರಿಯೆಗಳಿವೆ. ಗಂಡು ಮೇಕೆಯನ್ನು 'ಹೋತ' ಎಂದು ಕರೆದಾಗ ಅದಕ್ಕೆ ಸೃಷ್ಟಿಸುವ ಶಕ್ತಿ ಇದೆ. ಟಗರು, ಆಡು, ಹೋತಗಳನ್ನು ಉಪಮೆಯನ್ನಾಗಿ ಕನಕರು ಇಲ್ಲಿ ಬಳಸಿಕೊಂಡು ಅವುಗಳಿಗೆ ತಮ್ಮದೇ ಆದಾ ಸಂವೇದನೆಯನ್ನೂ ತುಂಬುತ್ತಾರೆ. ಅಜ್ಜ ಎಲ್ಲಾ ಪ್ರಾಣಿಗಳನ್ನು ತನ್ನ ಅಧೀನತೆಯಲ್ಲಿ ಇಟ್ಟುಕೊಳ್ಳುತ್ತಾನೆ. ಈ ತುಲನಾತ್ಮಕ ಕ್ರಿಯೆ ಎರಡನೇ ನುಡಿಯಲ್ಲೂ ಮುಂದುವರೆಯುತ್ತದೆ.

ಸಾಮಾನ್ಯವಾಗಿ ಕುರಿಗಳ ಹಿಂಡನ್ನು ಕಾಯುವುದಕ್ಕೆ ಕುರುಬ ಒಳ್ಳೆಯ ನಾಯಿಗಳನ್ನು ಸಾಕಿರುತ್ತಾನೆ. ಕಾರಣ ತೋಳ ಕಿರುಬಗಳ ಭಯದಿಂದ ಕನಕದಾಸರು ಇಲ್ಲಿಂದ ಕೀರ್ತನೆ ಮುಕ್ತಾಯವಾಗುವವರೆಗೂ ಮನುಕುಲ, ಪ್ರಾಣಿಕುಲ, ಜ್ಞಾನದ ವಿಶಾಲ ಚೌಕಟ್ಟು ತಾತ್ವಿಕತೆ ಮುಂತಾದ ಆಯಾಮಗಳನ್ನು ಮುಖಾಮುಖಿಯಾಗಿಸುತ್ತಾ ಹೋಗುತ್ತಾರೆ. ವೇದಶಾಸ್ತ್ರ ಪುರಾಣಗಳನ್ನು ಶ್ವಾನಗಳಿಗೆ ತುಲನೆ ಮಾಡಿದರೂ ಕೂಡ ಆ ಪದಗಳು ಸಮೂಹ ಪ್ರಧಾನ ಸಂಸ್ಕೃತಿಯ ಬೆನ್ನಲ್ಲಿವೆ ಎಂಬುದು ಕನಕರಿಗೆ ಅರಿವಿದೆ. ಆದರೂ ಶ್ವಾನಗಳಿಗೆ ಹಾದಿ ಕಾಣುತ್ತಿಲ್ಲ, ಕೂಗಿ ಬಾಯಾರಿ ಕೊನೆಗೆ ಅಜ್ಜನ ಬಳಿಗೆ ಗಂಜಿಗಾಗಿ ಬರುತ್ತವೆ. ಇಲ್ಲಿ ಅಜ್ಜ ಒಂದೊಂದು ನುಡಿಯಲ್ಲೂ ವಿಭಿನ್ನ ಪಾತ್ರವಹಿಸುತ್ತಾನೆ. ಅಜ್ಜ ಕಿರುಸಂಸ್ಕೃತಿಯ ರೂಪಕವೇ? ದಾಸರು ಇವೆರಡನ್ನು (ಪ್ರಧಾನ+ಕಿರು) ಸಮನಾಗಿ ಕಾಣಲು ಪ್ರಯತ್ನಿಸಿದ್ದಾರೆ.

ಪ್ರಾಯಃ ಕೀರ್ತನ ಪರಂಪರೆಯಲ್ಲಿ ಅಲ್ಲಮನ ರೀತಿಯಲ್ಲಿ ಅರಿವಿನ ಕುರಿತು, ತಲೆಕೆಡಿಸಿಕೊಂಡವರು ಕಡಮೆಯಾದರೂ, ಕನಕದಾಸರು ಆ ಪಟ್ಟಿಯಲ್ಲಿ ಪ್ರಮುಖರಾಗುತ್ತಾರೆ. 'ಜ್ಞಾನ' ಮಾರ್ಗದ ಪರಿಕಲ್ಪನೆಯಾದರೆ, 'ಅರಿವು' ದೇಸಿ ಪರಿಕಲ್ಪನೆ ಎಂಬುದು ಈಗಾಗಲೇ ಚರ್ಚೆಯಾಗಿದೆ. ವಚನಕಾರರು ಅರಿವಿನ ಬಗ್ಗೆ ಸಾಕಷ್ಟು ವಿಸ್ತೃತವಾಗಿ ಚಿಂತನೆ ನಡೆಸಿದ್ದಾರೆ. ಆ ಕುರಿತು ಹೆಚ್ಚಿನ ಚರ್ಚೆ ಇಲ್ಲಿ ಅಪ್ರಸ್ತುತ. ಇವರ ಪ್ರಭಾವದಿಂದ ಕನಕದಾಸರೂ ಕೂಡ ಹೊಸದೊಂದು ಲೋಕಗ್ರಹಿಕೆಯನ್ನು ಅನಾವರಣಗೊಳಿಸುತ್ತಾರೆ. ಕೀರ್ತನೆಯ ನಾಲ್ಕನೆಯ ನುಡಿಯಲ್ಲಿ ಅಜ್ಜ ಜಡವಾಗುತ್ತಾನೆ. ಕಾರಣ ಸಾವಿನ ಬಗೆಗಿನ ಚಿಂತನೆ ನಡೆದಿದೆ. ಲೋಕದಲ್ಲಿ ಎಲ್ಲಾ ಪ್ರಾಣಿ, ಪಕ್ಷಿಗಳಿಗೂ ಮನುಕುಲದ ಹಾಗೆ ಬದುಕುವ ಹಕ್ಕು ಇದೆ. ಆದರೆ ಸಾವು ಅನಿವಾರ್ಯ. ಕುರಿಗಳನ್ನು ತೋಳ, ತೋಳವನ್ನು ವ್ಯಾಘ್ರ, ಹೇಗೆ ಒಂದನ್ನೊಂದು ಸಾಯಿಸಿಯೇ ಬದುಕಬೇಕು, ಎನ್ನುವ ವೈಜ್ಞಾನಿಕ ಮನೋಭಾವದೊಂದಿಗೆ ಅನುಭಾವದ ನೆಲೆಯೂ ಆವರಿಸಿದೆ.

ಹುಟ್ಟು-ಸಾವುಗಳನ್ನು ಬಲ್ಲವನು ಅಜ್ಜ, ಆದರೂ ಅವನು ಅಷ್ಟೂ ಪ್ರಾಣಿಗಳಿಗೆ ಸ್ವಾತಂತ್ರ್ಯ ಕೊಡುತ್ತಾನೆ. ಅಂಬಲಿ(ಗಂಜಿ) ಕೊಡುತ್ತಾನೆ. ಕೀರ್ತನೆಯ ಮುಕ್ತಾಯದ ವೇಳೆಗೆ ಕನಕದಾಸರು 'ಅಜ್ಜನ' ಮರ್ಮವನ್ನು ಸ್ವಲ್ಪಮಟ್ಟಿಗೆ ತೆರೆಯುತ್ತಾರೆ. ಅಜ್ಜನು ಕಲಿಯುಗಕೆ ಗೌಡ ಎಂಬುದು ತಿಳಿಯುತ್ತದೆ. ಆದರೂ ಆತನ ಕುರಿತು ಒಂದು ದೊಡ್ಡ ಜಿಜ್ಞಾಸೆ ಇದೆ. ಬೇರೊಂದು ನೆಲೆಯಲ್ಲಿ ಚಿಂತನೆ ನಡೆಸಿದಾಗ ಅಜ್ಜ ಒಬ್ಬ ಸೃಷ್ಟಿಕರ್ತನೆಂಬ ಗುಮಾನಿಯೂ ಹುಟ್ಟಿಕೊಳ್ಳುತ್ತದೆ. ಭೂಮಿಯ ಎಲ್ಲಾ ಜೀವ ಜಗತ್ತನ್ನು ಅಜ್ಜ (ಭಗವಂತ-ಸೃಷ್ಟಿಕರ್ತ) ತನ್ನ ಅಧೀನದಲ್ಲಿಟ್ಟಿಕೊಂಡಿರುತ್ತಾನೆ. ಮನುಷ್ಯ ಏನಿದ್ದರೂ ಅವನ ಅಡಿಯಾಳು ಎಂಬ ನಿಲುವಿಗೆ ಕನಕದಾಸರು ತಲುಪಿರುವುದು ಕಂಡುಬರುತ್ತದೆ. ಕೀರ್ತನೆಯ ಕೊನೆಯ ಸಾಲುಗಳಲ್ಲಿ ಭಕ್ತಿಯು ನುಸುಳಿದ್ದರೂ, ಉದ್ದಕ್ಕೂ ಬೌದ್ಧಿಕ ವ್ಯಾಯಾಮ ನಡೆದಿರುವುದು ಕಾಣಬಹುದು.

❑

# ಮಾಸ್ತಿಯವರ ವಿಮರ್ಶಾ ಮನೋಧರ್ಮ

• ಪ್ರೊ. ಜಿ. ಅಬ್ದುಲ್ ಬಷೀರ್

ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಮಾಸ್ತಿಯವರು ಕನ್ನಡದ ಆಸ್ತಿಯೆಂದೇ ಪ್ರಖ್ಯಾತರಾಗಿದ್ದಾರೆ. ಹೊಸಗನ್ನಡ ಭಾಷೆ ಹಾಗೂ ಸಾಹಿತ್ಯವನ್ನು ಶ್ರೀಮಂತಗೊಳಿಸಿದ, ಕರ್ನಾಟಕದ ಸಾಂಸ್ಕೃತಿಕ ಬದುಕನ್ನು ಸಂಪದ್ಯುಕ್ತಗೊಳಿಸಿದ ಮಾಸ್ತಿಯವರು ಸಂಸ್ಕೃತಿಯ ಸಾಕಾರ ವ್ಯಕ್ತಿಯಾಗಿದ್ದರು. ಅವರ ಜೀವನ ಬೇರೆಯಲ್ಲ, ಬರೆಹ ಬೇರೆಯಲ್ಲ, ಮಾಸ್ತಿಯವರು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ೯೩ ಕೃತಿಗಳನ್ನು ರಚಿಸಿದ್ದಾರೆ. ಅವರಿಗೆ ಸಾಹಿತ್ಯದ ಎಲ್ಲಾ ಪ್ರಕಾರಗಳೂ ಕರತಲಾಮಲಕವಾಗಿವೆ. ಕಥನ ಕವಿತೆ, ಸಣ್ಣ ಕತೆ ಹಾಗೂ ವಿಮರ್ಶೆಯ ಕ್ಷೇತ್ರಗಳಲ್ಲಂತೂ ಅವರು ಲೀಲಾಜಾಲವಾಗಿ ಓಡಾಡಿದ್ದಾರೆ. ಹೊಸಗನ್ನಡ ಗದ್ಯ ಲೇಖಕರಲ್ಲಿ ಅದ್ವಿತೀಯರೆನಿಸಿದ ಮಾಸ್ತಿಯವರು ಅದಕ್ಕೊಂದು ಆಳ, ವಿಸ್ತಾರ ಮತ್ತು ಔನ್ನತ್ಯವನ್ನು ತಂದುಕೊಟ್ಟರು. ಹೊಸಗನ್ನಡ ಯುಗವನ್ನು 'ಗದ್ಯದ ಯುಗ' ಎಂದು ಹೆಸರಿಸಲು ಮಾಸ್ತಿಯಂಥ ಲೇಖಕರ ಕೊಡುಗೆ ಕಾರಣ ವಾಗಿದೆ.

ಮಾಸ್ತಿಯವರು ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಹೊಂಗೇನಹಳ್ಳಿಯಲ್ಲಿ ಜನಿಸಿದರು. ಅವರ ತಂದೆ ರಾಮಸ್ವಾಮಿ ಅಯ್ಯಂಗಾರ್; ತಾಯಿ ತಿರುಮಲಮ್ಮ. 'ಮಾಸ್ತಿ' ಮಾಸ್ತಿಯವರ ಮನೆತನದವರ ಊರು. ಇವರ ಪೂರ್ಣ ಹೆಸರು ವೆಂಕಟೇಶ ಅಯ್ಯಂಗಾರ್; ಕಾವ್ಯನಾಮ ಶ್ರೀನಿವಾಸ!

ಮಾಸ್ತಿಯವರು ಆದಿಕವಿ ವಾಲ್ಮೀಕಿ, ಭಾರತತೀರ್ಥ, ಸಾಹಿತ್ಯ, ಕರ್ನಾಟಕದ ಜನತೆಯ ಸಂಸ್ಕೃತಿ, ಕರ್ನಾಟಕದ ಜನಪದ ಸಾಹಿತ್ಯ, ಸಾಹಿತ್ಯದಿಂದ ಆಗುವ ಕೆಲಸ, ವಿಮರ್ಶೆ; ಸಂಪುಟ, ೧,೨,೩, ೪; ಉತ್ತರಕಾಂಡ ಮುಂತಾದ ವಿಮರ್ಶೆಯ ಕೃತಿಗಳನ್ನು ರಚಿಸಿದ್ದಾರೆ.

ವಿಮರ್ಶಕನ ಕೆಲಸಗಳು ಎರಡು: ಒಬ್ಬ ಸಮರ್ಥ ಓದುಗ ಸಾಹಿತ್ಯ ಗ್ರಂಥವೊಂದನ್ನು ಓದಿ ತನಗೋಸ್ಕರ ಅರ್ಥಮಾಡಿಕೊಂಡು ರಸಾನುಭವ ಪಡೆದು, ತನ್ನ ಅಕ್ಕಪಕ್ಕದ ಜನತೆಗೆ ಅರ್ಥಮಾಡಿಸುವ, ತನಗೆ ಆದ ಸಂತೋಷವನ್ನು ಅನ್ಯರಿಗೆ ಹಂಚುವ ಪ್ರಯತ್ನ ಮೊದಲನೆಯದು; ಸಾಹಿತ್ಯ ಗ್ರಂಥದ ಗುಣ ದೋಷಗಳನ್ನು ವಿಶ್ಲೇಷಿಸಿ ಮೌಲ್ಯನಿರ್ಣಯ ಮಾಡುವುದು ಎರಡನೆಯದು. ಹಾಗೆ ಮಾಡುವ ವಿಮರ್ಶಕನಿಗೆ ಕಲ್ಪನಾಶಕ್ತಿ ಸಹಾನುಭೂತಿ, ಉನ್ಮಿಲನ ದೃಷ್ಟಿ, ಜೀವನಾನುಭವ, ಅನ್ಯಭಾಷಾ ಸಾಹಿತ್ಯ ಕೃತಿಗಳ ಪರಿಚಯ, ವಿದ್ವತ್ತು, ಜಗತ್ತಿನ ಶ್ರೇಷ್ಠ ಕೃತಿಗಳ ಪರಿಚಯ, ನಿರ್ಭೀತಿ, ರೀತಿ–ತಂತ್ರಗಳನ್ನು ಗುರುತಿಸಿ ಮೆಚ್ಚುವ ಸಾಮರ್ಥ್ಯ, ಪ್ರಕ್ಷಿಪ್ತ ಭಾಗಗಳನ್ನು ಗುರುತಿಸುವುದು, ಪೂರ್ವಗ್ರಹ ವಿಮುಕ್ತಿ, ತೌಲನಿಕ ದೃಷ್ಟಿ, ಸಮಕಾಲೀನ ಪ್ರಜ್ಞೆ, ಉದಾರತೆ, ವ್ಯಾಖ್ಯಾನ ಕೌಶಲಗಳಿರಬೇಕು. ಉತ್ತಮ ವಿಮರ್ಶಕನಲ್ಲಿರಬೇಕಾದ ಈ ಎಲ್ಲಾ ಗುಣಗಳೂ ಮಾಸ್ತಿಯವರಲ್ಲಿವೆ. ಅವರ ವಿಮರ್ಶಾ ಕೃತಿಗಳನ್ನೊಮ್ಮೆ ಅವಲೋಕಿಸಿದರೆ ಇದಕ್ಕೆ ಪುರಾವೆಗಳು ಲಭಿಸುತ್ತವೆ.

ವಿಮರ್ಶೆ ಬುದ್ಧಿಪ್ರಧಾನವಾದರೂ ಮಾಸ್ತಿಯವರ ನಿರೂಪಣಾ ವಿಧಾನದಿಂದ ಅದೊಂದು ಕಲೆಯಾಗಿ ಪರಿಣಮಿಸಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ವಿಮರ್ಶೆ ಸಾಮಾಜಿಕರಲ್ಲಿ ಉತ್ತಮ ಅಭಿರುಚಿಯನ್ನು ಬೆಳೆಸುತ್ತದೆ; ಇಂಥ ಭಾಷೆಯಲ್ಲಿ ಒಂದು ಉತ್ತಮ ಸಾಹಿತ್ಯ ಕೃತಿಯಿದೆ ಎಂದು ಹೇಳಿ ಅದರ ಮಹಿಮೆಯನ್ನು ಪ್ರಕಟಿಸುತ್ತದೆ. ಆ ಕೃತಿಯಲ್ಲಿರಬಹುದಾದ ಕಾಲ ದೇಶಗಳನ್ನು ಗೆದ್ದು ನಿಲ್ಲುವ ಸಾಮರ್ಥ್ಯ ಯಾವುದು? ಆ ಕೃತಿಗಳಲ್ಲಿ ಹುದುಗಿರುವ ವಿಚಾರವೆಂಥದು ಎಂದು ತೆರೆದು ತೋರಿ, ಅವು ಹೇಗೆ ಶ್ರೇಷ್ಠಕೃತಿಗಳೆಂಬುದರ ನಿರೂಪಣೆಯನ್ನು ಮಾಡುತ್ತದೆ.

**ಮಾಸ್ತಿಯವರ ವಿಮರ್ಶೆಯನ್ನು ಎರಡು ಭಾಗ ಮಾಡಬಹುದು:**

೧. ಪ್ರಾಚೀನ ಸಾಹಿತ್ಯ ಕೃತಿಗಳ ವಿಮರ್ಶೆ: ಆದಿಕವಿ ವಾಲ್ಮೀಕಿ, ಭಾರತ ತೀರ್ಥ, ಉತ್ತರ ಕಾಂಡ, ವಿಮರ್ಶೆಯ ನಾಲ್ಕು ಸಂಪುಟಗಳು, ಇತ್ಯಾದಿ.

೨. ಅರ್ವಾಚೀನ ಇಲ್ಲವೆ ಸಮಕಾಲೀನ ಕೃತಿಗಳ ವಿಮರ್ಶೆ! ನಾದಲೀಲೆಯ ವಿಮರ್ಶಾತ್ಮಕ ಮುನ್ನುಡಿ, ನಾಟಕಗಳನ್ನು ಕುರಿತ ಗಯಟೇ ಕವಿಯ ಮಾತುಗಳು ಇತ್ಯಾದಿ.

ಮತ್ತೊಂದು ದೃಷ್ಟಿಯಿಂದ ಮಾಸ್ತಿಯವರ ವಿಮರ್ಶಾ ಬರೆಹಗಳನ್ನು ಎರಡು ಭಾಗ ಮಾಡ ಬಹುದು:

೧. ಸಾಹಿತ್ಯದ ಅರ್ಥವಿವರಣೆ, ಪ್ರಯೋಜನ: ವಿಮರ್ಶೆಯ ಸ್ವರೂಪ, ಪ್ರಯೋಜನ, ವ್ಯಾಪ್ತಿಯೇ ಮುಂತಾದ ತಾತ್ತ್ವಿಕ ಸೈದ್ಧಾಂತಿಕ ರೂಪದ ಬರೆಹಗಳು.

೨. ಸಾಹಿತ್ಯ ಗ್ರಂಥಗಳ ಸ್ವಾರಸ್ಯ, ವ್ಯಾಖ್ಯಾನಗಳ ಬರೆಹಗಳು. ಮಾಸ್ತಿಯವರ ವಿಮರ್ಶೆಯಲ್ಲಿರುವ ಈ ಹರಹನ್ನು ಗಮನಿಸಿದರೆ ಅವರ 'ಬಹುಜ್ಞತೆ' ಅರಿವಿಗೆ ಬಾರದಿರದು. ಕನ್ನಡ, ಇಂಗ್ಲಿಷ್, ತಮಿಳು, ಹಾಗೂ ಸಂಸ್ಕೃತ ಭಾಷೆಗಳನ್ನು ಚೆನ್ನಾಗಿ ಬಲ್ಲ ಮಾಸ್ತಿ ಆಯಾ ಭಾಷೆಗಳಲ್ಲಿ ಮೂಡಿರುವ ಶ್ರೇಷ್ಠಗ್ರಂಥಗಳನ್ನು ಮನನ ಮಾಡಿದವರೂ ಆಗಿದ್ದಾರೆ.

ಹೀಗಾಗಿ ಮಾಸ್ತಿಯವರ ವಿಮರ್ಶಾ ಮನೋಧರ್ಮವನ್ನು ಗುರುತಿಸಲು ಅಷ್ಟು ಕಷ್ಟಪಡಬೇಕಾಗಿಲ್ಲ; ಅದನ್ನು ಹೀಗೆ ಪಟ್ಟಿ ಮಾಡಬಹುದು:

೧. ಯಾವುದೇ ಭಾಷೆಯದಿರಲಿ-ಉತ್ತಮ ಸಾಹಿತ್ಯ ಕೃತಿಗಳ ಪರಿಚಯ ಕನ್ನಡಿಗರಿಗಾಗಬೇಕು.

೨. ಜನರನ್ನು ಸುಸಂಸ್ಕೃತರನ್ನಾಗಿ ಮಾಡಬೇಕು.

೩. ಪ್ರಾಚೀನ ಅರ್ವಾಚೀನ ಸಂಸ್ಕೃತಿಯ ತಿರುಳನ್ನು ಹೆಕ್ಕಿ ತೆಗೆಯಬೇಕು.

೪. ಯಾವುದನ್ನೇ ಆಗಲಿ ಸರಳವಾಗಿ, ಪ್ರಸನ್ನವಾಗಿ, ನೇರವಾಗಿ, ಅಸಂದಿಗ್ಧವಾಗಿ, ಸಂಕ್ಷಿಪ್ತವಾಗಿ, ನಯವಾಗಿ, ನಿರುದ್ವಿಗ್ನ ಮನೋಭಾವದ ಗದ್ಯದ ಮೂಲಕ ಹೇಳಬೇಕು. ಸಣ್ಣ ವಾಕ್ಯಗಳು, ಸರಳ ಮಾತುಗಳು, ಭಾವಸೂಚಕರಹಿತ ಪದ ಬಳಕೆ-ಬಸವಣ್ಣನವರು ಹೇಳಿದಂತೆ ನುಡಿದರೆ ಮುತ್ತಿನ ಹಾರದಂತಿರಬೇಕು; ಅಲ್ಲಮಪ್ರಭು ಹೇಳಿದಂತೆ ಮಾತೆಂಬುದು ಜ್ಯೋತಿರ್ಲಿಂಗ; ಸರ್ವಜ್ಞ ಹೇಳಿದಂತೆ 'ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ' ವಿಮರ್ಶೆಯಲ್ಲಿರಬೇಕು.

೫. ಕೃತಿಯೊಂದನ್ನು ವಿಮರ್ಶಿಸುವಾಗ ತಾತ್ತ್ವಿಕ ಸಿದ್ಧಾಂತಗಳನ್ನು ಮಾಡಬೇಕೆಂಬ ಹಟವಾಗಲಿ, ಸಿದ್ಧ ವಿಮರ್ಶಾ ತತ್ತ್ವಗಳನ್ನು ಆರೋಪಿಸಿ ಕೃತಿಯೊಂದನ್ನು ವಿಮರ್ಶೆ ಮಾಡಬೇಕೆಂಬ ಛಲವಾಗಲೀ ಇರಬಾರದು.

೬. ಕೃತಿಯಲ್ಲಿನ ರಸ ಸ್ಥಾನಗಳನ್ನು ಗುರುತಿಸಿ ಸಹೃದಯರಿಗೆ ತಿಳಿಸಬೇಕು; ವಿಮರ್ಶೆಯ ಗುರಿ ಸಹೃದಯರ ರುಚಿ ಸಂಸ್ಕಾರ, ಹೀಗೆ ಮಾಡುವಾಗ ಒಂದೆರಡು ಮೆಚ್ಚುಗೆಯ ಅತ್ಯುಕ್ತಿಗಳು ಬರಬಹುದು.

೭. ಆಲೋಚನೆಯಲ್ಲಿ ಸ್ಪಷ್ಟತೆ, ಅರ್ಥವ್ಯಕ್ತಿ, ವಾಗಾಡಂಬರ ಮಾಡಬಾರದು.

ಆಧುನಿಕ ವಿಮರ್ಶಕರು ಮಾಸ್ತಿಯವರ ವಿಮರ್ಶೆಯನ್ನು ಪೂರ್ಣವಾಗಿ ಗಮನಿಸುತ್ತಿಲ್ಲ; ಇದಕ್ಕೆ ಕಾರಣ ಅವರ ವಿಮರ್ಶಾ ಮನೋಧರ್ಮವನ್ನು ಅವರು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದು. ರಾಮಾಯಣ, ನಾದಲೀಲೆ, ಜೈಮಿನಿ ಭಾರತ, ಮೇಘದೂತ ಮತ್ತು ತಮಿಳು ವೈಷ್ಣವ ಪ್ರಬಂಧಗಳ ಬಗ್ಗೆ ಮಾಸ್ತಿಯವರು ಹೆಚ್ಚಿನ ಪ್ರಶಂಸೆಯ ಮಾತುಗಳನ್ನಾಡಿದ್ದಾರೆ. ಕೆಲವರಿಗವು ಅತ್ಯುಕ್ತಿಗಳೆನಿಸಬಹುದು. ಆದರೆ ಮಾಸ್ತಿಯವರ ಉದ್ದೇಶ ಸಹೃದಯರನ್ನು ಸಾಹಿತ್ಯದತ್ತ ಸೆಳೆದುಕೊಳ್ಳಬೇಕೆಂಬುದಾಗಿದೆ. ಉದಾ: ಲಕ್ಷ್ಮೀಶನ ಜೈಮಿನಿ ಭಾರತ ಪಂಡಿತರಿಗೂ ಪಾಮರರಿಗೂ ಮೆಚ್ಚುಗೆಯಾಗುವ ಅಪೂರ್ವ ಕಾವ್ಯ; ಈ ಕಾವ್ಯವು ರೂಪದಿಂದ ಮಾತ್ರವಲ್ಲದೆ ನಿಜವಾಗಿಯೂ ಕಾವ್ಯ; ಭಕ್ತಿರಸಪ್ರಧಾನವಾದ ಈ ಕಥೆಗಳನ್ನು ಹೇಳಿದಾತನು ಉತ್ತಮಮಾರ್ಗದ ಕವಿ." ಮಾಸ್ತಿಯವರು ಈ ಮಾತನ್ನಾಡುವಾಗ ಜೈಮಿನಿ ಭಾರತದಲ್ಲಿ ಬರುವ ಶಬ್ದಾಲಂಕಾರಗಳ ಗಲಾಟೆ, ನೀರಸ ವರ್ಣನೆಗಳನ್ನು ಮರೆಯುತ್ತಾರೆ. ಆದರೆ ಮಾಸ್ತಿಯವರ ಮುಂದಿನ ಮಾತುಗಳನ್ನು ಗಮನಿಸಿ! – ಕವಿ ಹಿರಿಯನಾಗಬೇಕಾದರೆ ಇವನು ಬರೆಯುವ ಕಾಲ ಅವನ ಕೆಲಸಕ್ಕೆ ಅನುಕೂಲವಾಗಿರಬೇಕು. ಸುತ್ತ ಒಳ್ಳೆಯ ಕೆಲಸ ನಡೆಯುತ್ತಿರಬೇಕು; ಅತಿ ಬುದ್ಧಿಯ ವಿಮರ್ಶೆ ಅದಕ್ಕೆ ತೊಡರಾಗಿ ಬರುತ್ತಿರಬಾರದು. ಮಾಸ್ತಿಯವರ ವಿಮರ್ಶಾ ಮನೋಧರ್ಮವೆಂತಹುದೆಂಬುದು ಇದೀಗ ಸ್ಪಷ್ಟವಾಗುತ್ತದೆ.

ಒಂದೊಂದು ನಾಡ ಜನವೂ ಉಳಿದೆಲ್ಲ ನಾಡುಗಳ ಹಿರಿಯರ ವಾಣಿಯ ಪರಿಚಯವನ್ನು ಮಾಡಿಕೊಳ್ಳಬೇಕು ಎಂದು ಹೇಳಿ–ತಮಿಳು ವೈಷ್ಣವ ಪ್ರಬಂಧಗಳು ಎಲ್ಲ ಮತದವರೂ ಓದಿ ಸಂತೋಷಿಸಬಹುದು; ಆಧ್ಯಾತ್ಮಿಕ ಸಾಧನೆಯಲ್ಲಿ ಸಹಾಯ ಪಡೆಯಬಹುದು; ಕಾವ್ಯ ದೃಷ್ಟಿಯಿಂದ ಓದಿ ಸಂತೋಷಿಸಬಹುದು" ಎಂದು ಉದಾಹರಣೆಗಳ ಮುಖಾಂತರ ತಿಳಿಸಿದ್ದಾರೆ;

"ಒಳಿತೆಂದು ತಿಳಿಯಿರಿ; ನರಕಕ್ಕೆ ಇಳಿಯದಿರಿ,
ಮೊದಲು ನೆಲವನ್ನೆತ್ತಿದವನು ನಿತ್ಯವಾಸ ಮಾಡುವ ಮಂದಿರ
ಮಲವನ್ನು ಕಳೆಯುವ ಚಂದ್ರನು ಸೇರುವ ತಿರುಮಾಲಿರುಂ ಜೋತಿಯನ್ನು
ಬಲಿಸುತ್ತು ಸುತ್ತಿ ಅಲ್ಲಿ ನಿಲ್ಲುವುದು ಭದ್ರ".

ಒಳ್ಳೆಯದರ ಉಪದೇಶ, ಕ್ಷೇತ್ರವನ್ನು ಕುರಿತ ಹೊಗಳಿಕೆ, ಪ್ರಕೃತಿ ಸೌಂದರ್ಯದ ವರ್ಣನೆ, ಇಷ್ಟದೈವ ಆರಾಧನೆ, ಇವು ಸರಿಸಮನಾಗಿ ಬೆರೆತು ಕೃತಿಕಾರನ ಮುಕ್ತ ಚೇತನದ ಸ್ವರೂಪವನ್ನು ತೋರಿಸುವ "ಈ ಕೃತಿಗೆ ಸಮನಾದ ಕೃತಿ ಧಾರ್ಮಿಕ ಸಾಹಿತ್ಯದಲ್ಲಾಗಲಿ, ಧಾರ್ಮಿಕವಲ್ಲದ ಸಾಹಿತ್ಯದಲ್ಲಾಗಲಿ ದೊರೆಯುವುದು ದುರ್ಲಭ." ಮಾಸ್ತಿಯವರ ಈ ಮಾತುಗಳು ಅತಿ ಪ್ರಶಂಸೆಯವು ಎಂದು ನಮಗನ್ನಿಸುತ್ತವೆ. ಆದರೆ ಅವರೇ ಹೇಳುವ ಈ ಮಾತನ್ನು ಗಮನಿಸಿ. "ಭರತವರ್ಷದ ಸಂಸ್ಕೃತಿ ಪ್ರಪಂಚದ ಚರಿತ್ರೆಯಲ್ಲಿ ತನ್ನ ಪಾಲಿಗೆ ಬಂದಿರುವ ಕೆಲಸವನ್ನು ಮಾಡಿ ಕೃತಾರ್ಥವಾಗಬೇಕಾದರೆ ನಮ್ಮ ದೇಶದ ಎಲ್ಲ ನಾಡುಗಳ ಮಹನೀಯ ಜೀವಗಳ ತಪಸ್ಸಿದ್ಧಿ ಒಟ್ಟುಗೂಡುವುದು ಅವಶ್ಯಕ. ಒಂದೊಂದು ನಾಡ ಜನವೂ ಉಳಿದೆಲ್ಲ ನಾಡುಗಳ ಹಿರಿಯರ ವಾಣಿಯ ಪರಿಚಯವನ್ನು ಮಾಡಿಕೊಳ್ಳಬೇಕು.[೩] ಲೋಕದ ಜನ ಸುಸಂಸ್ಕೃತರಾಗಿ ಬಾಳಲು ವಿಶ್ವವಿಖ್ಯಾತ ಕೃತಿಗಳ ಅಧ್ಯಯನದ ಅಗತ್ಯವಿದೆ ಎಂಬುದು ಮಾಸ್ತಿಯವರ ಸುಸಂಸ್ಕೃತ ಚೇತನ ಕಂಡಿದೆ!"

ಮಾಸ್ತಿಯವರು ನಾಟಕಗಳತ್ತ ನಮ್ಮ ಗಮನವನ್ನು ಸೆಳೆಯಲು, ನಮ್ಮ ತಿಳಿವನ್ನು ಹೆಚ್ಚಿಸಲೋಸುಗ 'ಗಯಟೇ ಕವಿಯ ಮಾತು; ನಾಟಕಗಳನ್ನು ಕುರಿತು' ಎಂಬ ವಿವರ ಪೂರ್ಣವೂ ಸ್ವಾರಸ್ಯಪ್ರದವೂ ಆದ ಪ್ರಬಂಧವನ್ನು ಬರೆದಿದ್ದಾರೆ.[೪] ನಾಟಕಗಳ ಬಗ್ಗೆ ನಮ್ಮವರಲ್ಲಿರುವ ಅನಾದರವನ್ನು ಮಾಸ್ತಿಯವರು ಅನ್ಯೋಕ್ತಿಗಳಲ್ಲಿ ಎತ್ತಿ ಹೇಳಿದ್ದಾರೆ; ಇಟಲಿ ಫ್ರಾನ್ಸ್ ದೇಶಗಳಲ್ಲಿ ನಾಟ್ಯಕಲೆಯ ವಿಷಯದಲ್ಲಿ ಜನತೆಯ ಅಭಿರುಚಿ ಬಹು ಸಂಸ್ಕೃತವಾಗಿದೆ. ಮತ್ತೆ ಮತ್ತೆ ಪಾಠಮಾಡಿ ನಟರು ಪಾತ್ರಗಳ ಹೃದಯವನ್ನು ಇನ್ನಷ್ಟು ಗ್ರಹಿಸಿದರೆ ಅವರ ಅಭಿನಯಕ್ಕೆ ಜೀವಕಳೆ ಬರುವುದು, ಅವರು ಆಡುವ ಮಾತು ಪಾಠದಿಂದ ಬಂದದ್ದಲ್ಲ, ಅವರ ಜೀವನದಿಂದ ಬಂದದ್ದು ಎಂಬಂತೆ ಕಾಣುವುದು; ಅದು ಹಾಗೆ ಆದಾಗ್ಯೆ ಜನ ಅದನ್ನು ನೋಡಿ ಬೇಸರ ಪಡಲಾರರು; ನೋಡುತ್ತ ತೆಪ್ಪಗೆ ಕುಳಿತಿರಲಾರರು.

ಇದು ಗಯಟೆಯ ಉದ್ದೇಶವಾದರೂ ಮಾಸ್ತಿಯವರ ಬಯಕೆಯೂ ಅದೇ ಆಗಿದೆ ಎಂಬುದು ಸ್ಪಷ್ಟವಾಗದಿರದು. ಅವರ ನಾಟಕಗಳ ಸಂಖ್ಯೆಯನ್ನೂ[೫] ಅವು ಪ್ರದರ್ಶನವಾದ ಬಗೆಯನ್ನೂ ಗಮನಿಸಿದರೆ ಅದು ಇನ್ನಷ್ಟು ನಿಚ್ಚಳವಾಗುತ್ತದೆ. ವಿಮರ್ಶಕರು ಸಹಾಯ ಮಾಡುವಂತಹ ವಿರ್ಮಶೆಯನ್ನು ಮಾಡಬೇಕು. ಬರೆಯುವವರೂ ದೋಷೋದ್ಘಾಟನವೇ

ದೊಡ್ಡದೆಂಬಂತೆ ಬರೆಯದೆ ಜನವೂ ಸಮಾಜವೂ ನಡೆಯಬೇಕಾದ ದಾರಿ ಯಾವುದೆಂದು ತೋರಿಸುವಂತೆ ಬರೆಯಬೇಕೆಂಬುದು "ಸಾಹಿತ್ಯದ ಬೆಳವಣಿಗೆಗೆ ಅದರಲ್ಲೂ ಪ್ರಾರಂಭದ ಹಂತದ ಸಾಹಿತ್ಯ ಕೃಷಿಗೆ ಮಾಸ್ತಿಯವರ ಮಾತುಗಳು ತುಂಬ ಉತ್ತೇಜನ ನೀಡುವಂಥವು. ಮಾಸ್ತಿಯವರ ಕಾಲ್ಪನಿಕ ವಿಮರ್ಶಾ ವಿಧಾನಕ್ಕೆ ಗಯಟೆ, ಹಾಫಿಸ್, ಠಾಕೂರ್, ಅಗಸ್ಟೀನ್, ಆಳ್ವಾರರನ್ನು ಕುರಿತು ಬರೆದಿರುವ ಲೇಖನಗಳು ನಿದರ್ಶನವಾಗಿವೆ.

ಮಾಸ್ತಿಯವರ 'ಆದಿಕವಿ ವಾಲ್ಮೀಕಿ' ಅವರ 'ರಸಗ್ರಹಣ' ಹಾಗೂ 'ಗುಣಗ್ರಹಣ' ವಿಮರ್ಶೆಗೆ ಸುಂದರ ನಿದರ್ಶನವಾಗಿದೆ. ಉಳಿದ ಕೆಲವು ವಿಮರ್ಶಕರು ಗುರುತಿಸಿದಂತೆ ಮಾಸ್ತಿಯವರು ರಾಮನನ್ನು ದೇವರೆಂದು ಗುರುತಿಸದೆ 'ರಾಮ ಉತ್ತಮ ಮಾನವ ದೇವರಲ್ಲ' ಎಂದು ಗ್ರಹಿಸಿರುವುದು ಅವರ ನಿಷ್ಪಕ್ಷಪಾತವೂ ತೆರದ ಹೃದಯದ ವಿಮರ್ಶೆಗೂ ಉತ್ತಮ ನಿದರ್ಶನವಾಗಿದೆ. ವಿಮರ್ಶೆ, ಯಾರೋ ಹೇಳಿದ ಮಾತನ್ನು ಪುನರುಚ್ಚರಿಸುವಂಥದ್ದಲ್ಲ, ಕಣ್ಣು ಮುಚ್ಚಿಕೊಂಡು ಒಪ್ಪಿಕೊಳ್ಳವಂಥದವೆಂಬುದನ್ನು ಮಾಸ್ತಿಯವರು ತಿಳಿದುಕೊಂಡಂತೆ ಬಹಳ ಜನ ತಿಳಿದುಕೊಳ್ಳದಿರುವುದು ದುರದೃಷ್ಟವೇ ಸರಿ!

ಮಾಸ್ತಿಯವರ ತರ್ಕದೃಷ್ಟಿಗೂ ಸಂಶೋಧನ ಪ್ರವೃತ್ತಿಗೂ ಕೆಲವು ನಿದರ್ಶನಗಳನ್ನು ನೀಡಬಹುದು. ರಾಮಾಯಣದ ಪ್ರಕ್ಷೇಪ್ತ ಭಾಗಗಳೆಂದು ಉತ್ತರಕಾಂಡ, 'ರಾಮ ವಿಷ್ಣುವಿನ ಅವತಾರ'ವೆಂದು ಹೇಳುವ ಭಾಗ, 'ವಿಷ್ಣು ಶಿವನಿಗಿಂತ ದೊಡ್ಡವನು' ಎಂದು ಹೇಳುವ ವಾಕ್ಯಗಳು, 'ಅನೇಕ ಅಸಂಭಾವ್ಯ ಪವಾಡಸದೃಶ ಘಟನೆಗಳನ್ನು' ನಿದರ್ಶನಗಳನ್ನಾಗಿ ನೀಡಿದ್ದಾರೆ. ಮಾಸ್ತಿಯವರ ಸೂಕ್ಷ್ಮ ಚಿಕಿತ್ಸಕ ದೃಷ್ಟಿಗೂ, ಲೋಕಜ್ಞಾನಕ್ಕೂ ಉನ್ಮೀಲನ ವಿಮರ್ಶಾ ವಿಧಾನಕ್ಕೂ ಕೆಲವು ನಿದರ್ಶನಗಳನ್ನು ನೀಡಬಹುದು:

೧. ಭರತ ಶತ್ರುಘ್ನರು ಅಯೋಧ್ಯೆಯಲ್ಲಿಲ್ಲದ ಸಂದರ್ಭದಲ್ಲಿ ದಶರಥ ಪ್ರಜೆಗಳ ಅಪ್ಪಣೆಯಂತೆ ಶ್ರೀರಾಮನ ಪಟ್ಟಾಭಿಷೇಕದ ತೀರ್ಮಾನ ಮಾಡುತ್ತಾನೆ. ಎಲ್ಲೆಲ್ಲೂ ಸಂಭ್ರಮದ ವಾತಾವರಣ, ಊಟವನ್ನೂ ನಿದ್ರೆಯನ್ನೂ ಮರೆಯುವಂತಹ ಸಂತೋಷ. ಆದರೆ ತಾಯಿಯಾದ ಕೌಸಲ್ಯೆಗೆ ತನ್ನ ಮಗ ರಾಮ ಸಮಯಕ್ಕೆ ತಕ್ಕಂತೆ ಊಟ ಮಾಡುವುದು ಬಹುಮುಖ್ಯ. ಆಕೆ ಮಣೆ ಹಾಕಿ ಮಗನನ್ನು ಊಟಕ್ಕೆ ಬರಮಾಡುವುದು ತುಂಬ ಸಣ್ಣ ವಿಚಾರ. ಆದರೆ ಮಾಸ್ತಿ ಅತ್ತ ಓದುಗರ ಗಮನ ಸೆಳೆದು ವಾಲ್ಮೀಕಿಯ ಲೋಕಜ್ಞಾನಕ್ಕೆ ಕನ್ನಡಿ ಹಿಡಿಯುತ್ತದೆ, ಇದನ್ನು ಅವಜ್ಞೆಮಾಡುವಂಥದಲ್ಲ' ಎಂದು ಹೇಳಿದ್ದಾರೆ.

೨. ಸುಮಂತ್ರನೊಡನೆ ದಶರಥ ಮಾತಾಡದಿದ್ದಾಗ ಕೌಸಲ್ಯೆ, ಸುಮಂತ್ರನನ್ನು ಮಾತನಾಡಿಸು, ಹೆದರಬೇಡ, ಕೈಕೆ ಇಲ್ಲಿ ಇಲ್ಲ" ಎಂದು ಚುಚ್ಚುವಳು. ವಾಲ್ಮೀಕಿಯ ಸ್ವಭಾವಜ್ಞತೆಯ ಸಮಗ್ರತೆ ಪ್ರಕೃತಿಯ ಸಮಗ್ರತೆಗೆ ಸಾಟಿಯಾಗುತ್ತದೆ" ಎಂದು ಹೇಳಿರುವುದನ್ನು ಗಮನಿಸಬೇಕು. ಮಾನವ ಜೀವನದ ವಿಸ್ತಾರ ಬದುಕು ಅಯೋಧ್ಯಾ ಕಾಂಡದಲ್ಲಿ ತೆರೆದಿರುವ ಬಗೆಯನ್ನೂ ಎಳೆಎಳೆಯಾಗಿ ಬಿಡಿಸಿ ತೋರಿಸಿದ್ದಾರೆ.

೩. ರಾಮ ದಶರಥನಿಗೆ ತರ್ಪಣ ಕೊಟ್ಟಾಗ ಆತನ ಬಟ್ಟೆ ಧೂಳಾಯಿತು. ತಾಯಂದಿರು ಆ ಧೂಳನ್ನು ಕೊಡವಿದರು. ಮಾತೃಮಮತಾರ್ಣವವನ್ನು ವಾಲ್ಮೀಕಿ ಚಿತ್ರಿಸಿರುವುದನ್ನು ಮಾಸ್ತಿ ಗುರುತಿಸಿದ್ದಾರೆ.

೪. ರಾಮನನ್ನು ಕೈಕೆಯಾಗಲೀ ದಶರಥನಾಗಲೀ ಕಾಡಿಗೆ ಅಟ್ಟಲಿಲ್ಲ, 'ರಾಮನಲ್ಲಿದ್ದ ಧರ್ಮವಿವೇಚನೆಯೇ ಆತನನ್ನು ಕಾಡಿಗೆ ಅಟ್ಟಿತು' ಎಂದು ಹೇಳುವ ಮಾಸ್ತಿಯವರು ಧರ್ಮಸೂಕ್ಷ್ಮವನ್ನೂ ಎತ್ತಿ ಆಡಿರುವುದು ಉನ್ಮೀಲನಾತ್ಮಕ ವಿಮರ್ಶೆಗೆ ಸುಂದರ ನಿದರ್ಶನವಾಗಿದೆ.

೫. "ಸ್ತ್ರೀ ಸಹಜ ಸುಖವನ್ನರಿತಿದ್ದ ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋದರೂ ಬಲವಂತವಾಗಿ ತನ್ನವಳನ್ನಾಗಿ ಮಾಡಿಕೊಳ್ಳಲು ಇಚ್ಛಿಸಲಿಲ್ಲ, ಇದು ರಾವಣನ ಒಳ್ಳೆಯ ಗುಣ" ಎಂದು ಮಾಸ್ತಿಯವರಾಡಿರುವ ಮಾತುಗಳು ನಿಷ್ಪಕ್ಷಪಾತ ವಿಮರ್ಶೆಯ ಮಾದರಿಯಾಗಿದೆ. ಕೆಟ್ಟ ಪಾತ್ರಗಳಲ್ಲಿಯೂ ಒಳಿತನ್ನೂ ಕಾಣುವ ಔದಾರ್ಯ ಸುಸಂಸ್ಕೃತರ ಲಕ್ಷಣವಾಗಿದೆ.

೬. "ಮಾನಿಷಾದ ಪ್ರತಿಷ್ಠಾಂತ್ವಮಗಮಃ ಶಾಶ್ವತೀಸ್ಸಮಾಃ ಯತ್ಕ್ರೌಂಚ ಮಿಥನಾದೇಕಂ ಅವಧೀಃ ಕಾಮಮೋಹಿತಂ" (ಎಲೈ ವ್ಯಾಧನೆ, ಕಾಮಮೋಹಿತವಾದ ಕ್ರೌಂಚಮಿಥುನ ಗಳಲ್ಲಿ ಒಂದನ್ನು ನೀನು ಕೊಂದೆಯಾದ ಕಾರಣ ಬಹುಕಾಲ ನಿನಗೆ ಉನ್ನತಿ ದೊರೆಯದೆ ಹೋಗಲಿ".)

ಕ್ರೌಂಚ ಪಕ್ಷಿಯ ವಧೆಯಾದಾಗ ಆದ ನೋವು, ವಾಲ್ಮೀಕಿಗೆ ಆದ ನೋವು. ವಾಲ್ಮೀಕಿಯ ಸುಸಂಸ್ಕೃತ ಜೀವಕ್ಕೆ ಪ್ರಪಂಚದ ಯಾತನೆಯಾಗಿ ಕಂಡಿದೆ. ಮುಂದೆ ಬೆಳೆಯುವ ಕಥೆಯಲ್ಲಿ ಅದು ರಾಮ ಮತ್ತು ಸೀತೆಯರ ಅಗಲಿಕೆಯ ನೋವಿನ ಪ್ರತಿನಿಧಿಯಾಗುತ್ತದೆ. ಪಶುಪಕ್ಷಿ ಮಾನವ ಜೀವವೊಂದೇ ಎಂಬ ತಾತ್ತ್ವಿಕ ಸಿದ್ಧಾಂತವನ್ನೂ ವಾಲ್ಮೀಕಿ ಕಂಡಿದ್ದಾನೆ. ಇದನ್ನು ಧ್ವನಿಯ ಮುಖಾಂತರ ಗ್ರಹಿಸಿದ ಮಾಸ್ತಿಯವರು 'ಜೀವನದಲ್ಲಿ ಸಣ್ಣದು ದೊಡ್ಡದು ಎಂಬುದಿಲ್ಲ' ವೆಂಬ ಅಂತರಂಗದ ಹೊಳಹನ್ನು ದಾಖಲಿಸಿದ್ದಾರೆ. ರಾಮಾಯಣ ಮಹಾಭಾರತಗಳ ಸೂಕ್ಷ್ಮಾವಲೋಕನದಿಂದ ಗ್ರಹಿಸಿದ ವಿಶೇಷ ಸಂಗತಿಗಳನ್ನು ನಿರೂಪಿಸಿದ ಮಾಸ್ತಿಯವರು ತಲುಪುವ ತೀರ್ಮಾನವನ್ನು ಗಮನಿಸಬೇಕು. "ಶ್ರೇಷ್ಠ ಕೃತಿಗಳ ಅಭ್ಯಾಸದಿಂದ ಮಾನವ ಬದುಕು ಸುಸಂಸ್ಕೃತವಾಗುತ್ತದೆ. ಒಳ್ಳೆಯದಕ್ಕೆ ಮನ ತೆರೆಯಬಹುದು; ಒಳಿತು ಕೆಡುಕಿನ ವಿಂಗಡಣೆ ಸಾಧ್ಯವಾಗುತ್ತದೆ" ಎಂದು ಹೇಳಿ, ರಾಮ, ಸೀತೆ, ಧರ್ಮರಾಯ, ವಿದುರ, ಭರತರನ್ನು ಉದಾಹರಿಸಿದ್ದಾರೆ. ನಿಷ್ಪಕ್ಷಪಾತವಾದ ತೌಲನಿಕ ವಿಮರ್ಶೆಯಿಂದ ಜಗತ್ತಿನ ಶ್ರೇಷ್ಠ ಕೃತಿಗಳನ್ನು ಗುರುತಿಸಬಹುದು. ಈಲಿಯಡ್ ಒಡೆಸ್ಸಿ, ಈನಿಡ್, ಪ್ಯಾರಡೈಸ್ ಲಾಸ್ಟ್, ಡಿವೈನ್ ಕಾಮಿಡಿ ಇವೆಲ್ಲಾ ಒಂದಿಲ್ಲವೊಂದು ದೃಷ್ಟಿಯಿಂದ ಜಗತ್ತಿನ ಶ್ರೇಷ್ಠ ಕೃತಿಗಳ ಸಾಲಿನಲ್ಲಿ ನಿಲ್ಲುತ್ತವೆ ಎಂದು ಹೇಳಿದ ಮಾಸ್ತಿಯವರು ರಾಮಾಯಾಣದ ಬಗ್ಗೆ ಇನ್ನಷ್ಟು ಹೊಸ ಸಂಗತಿಗಳನ್ನು ಪ್ರಸ್ತಾಪ ಮಾಡುತ್ತಾರೆ. ಈ ಮಾತುಗಳು ಅವರ ನಿಷ್ಪಕ್ಷಪಾತ ದೃಷ್ಟಿಗೂ ಕಾಲ್ಪನಿಕ ಮನೋಭಾವಕ್ಕೂ ಅತ್ಯುತ್ತಮ ನಿದರ್ಶನಗಳಾಗಿವೆ:

"ಪ್ರಕ್ಷಿಪ್ತ ಭಾಗಗಳಿಂದ ರಾಮಾಯಣ ಬೆಳೆದಿದೆ, ಇತರ ಕಾವ್ಯಗಳಂತೆ ರಾಮಾಯಣ ಅಚ್ಚುಕಟ್ಟಾಗಿ ಕಾಣುವುದಿಲ್ಲ. ವಾಲ್ಮೀಕಿಗೆ ಎಷ್ಟು ಹೇಳಬೇಕು; ಎಷ್ಟು ಬಿಡಬೇಕೆಂಬುದು ಮನಸ್ಸಿಗೆ ಬರುವುದೇ ಇಲ್ಲ. ಇದೊಂದರ ಹೊರತು ರಾಮಾಯಣದಲ್ಲಿ ಯಾವ ಕೊರತೆಯೂ ಇಲ್ಲ. ಇಲ್ಲಿನ ನಯವಾದ ಜೀವನ, ಎತ್ತರದ ನಾಯಕ ನಾಯಕಿಯರಲ್ಲಿ ಕಲ್ಪನೆ, ಪ್ರಕೃತಿ ಸೌಂದರ್ಯ ವರ್ಣನೆ, ಧರ್ಮದೃಷ್ಟಿ ಮಿಗಿಲಾದವು."

ಮಾಸ್ತಿಯವರು ಕೃತಿಯೊಂದನ್ನು ಓದುಗರಿಗೆ ಅರ್ಥಮಾಡಿಸುವ ವಿಧಾನ ಅವರ ವಿಮರ್ಶೆಯ ಸೋಜಿಗಗಳಲ್ಲಿ ಒಂದಾಗಿದೆ. ಕಾಳಿದಾಸನ 'ಮೇಘಸಂದೇಶ'ವನ್ನು ಕುರಿತು ಮಾಸ್ತಿಯವರು ಬರೆದಿರುವ ವಿಮರ್ಶೆ ತೌಲನಿಕವೂ ರಸಗ್ರಹಣವೂ ವೈಚಾರಿಕವೂ ಆದ ನಿಲುವಿನಿಂದ ಕೂಡಿರುವಂಥದ್ದು. "ಯಕ್ಷ ತನ್ನ ಸತಿಯ ತೊಡೆಯನ್ನು ಸಖನಿಗೆ ವರ್ಣಿಸಿದ್ದು", ವೇಶ್ಯೆಯರ ಮಾತು", ಹೆಣ್ಣಿನ ವರ್ಣನೆ" ಸಹೃದಯರಿಗೆ ಒಮ್ಮೊಮ್ಮೆ ಅನುಚಿತವೆನಿಸಬಹುದು. ಆದರೆ ಓದುಗರು ಗಮನಿಸಬೇಕಾದ್ದು ಇಷ್ಟು! ಯಕ್ಷ ಮಾತಾಡು ತ್ತಿರುವುದು ನಿರ್ಜೀವ ಮೋಡದೊಡನೆ. ಉಜ್ಜಯಿನಿಯ ಭೋಗ, ಉಜ್ಜಯಿನಿಯ ವೈಭವ, ಉಜ್ಜಯಿನಿಯ ಐಶ್ವರ್ಯದಲ್ಲಿ 'ಮೇಘಸಂದೇಶ' ಕಾವ್ಯ ಹುಟ್ಟಿರುವಂಥದ್ದು. ಇಂಥ ಭೋಗ ಸಾಗರದಲ್ಲಿರುತ್ತಾ ಬರೆದ ಕಾವ್ಯದಲ್ಲಿ ಇಂಥ ವಿಷಯಗಳು ಇಷ್ಟು ಮಿತವಾಗಿ, ಇಷ್ಟು ನಿರ್ಮಲವಾಗಿ ಬಂದಿರುವುದಕ್ಕೆ ನಾವು ಸಂತೋಷ ಪಡಬೇಕು. ಇತರ ದೇಶದ ಐಶ್ವರ್ಯದ ಸಾಹಿತ್ಯಗಳಲ್ಲಿ ಇದಕ್ಕೂ ಮೀರಿದ ಮಾತುಗಳಿರುತ್ತವೆ. ಅವುಗಳಲ್ಲಿ ಇಲ್ಲಿರುವಷ್ಟು ನಯವಿರುವುದಿಲ್ಲ". ಮಾಸ್ತಿಯವರು ಮೇಘಸಂದೇಶವನ್ನು ಕುರಿತು ಆಡಿರುವ ಮಾತುಗಳು ಸಮಕಾಲೀನ ಪ್ರಜ್ಞೆಯ ಹಿನ್ನೆಲೆಯಿಲ್ಲದೆ ಮಾಡಬಹುದಾದ ಕೃತಿ ವಿಮರ್ಶೆ ಎಂಥ ಅನಾಹುತಗಳನ್ನುಂಟು ಮಾಡಬಹುದೆಂಬುದರ ಎಚ್ಚರಿಕೆಯಾಗಿದೆ.[೬]

ಲಕ್ಷ್ಮೀಶನ ಜೈಮಿನಿಭಾರತದ ಸೀತಾ ಪರಿತ್ಯಾಗದ ಸಂದರ್ಭದ ಕೆಲವು ಪದ್ಯಗಳನ್ನು ಉದಾಹರಿಸಿ ಮಾಸ್ತಿಯವರು ಬರೆದಿರುವ ವಿಮರ್ಶೆ ಪ್ರಾಯೋಗಿಕ ವಿಮರ್ಶೆಯ ಒಂದು ಮಾದರಿಯಾಗಿದೆ.

"ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿ
ಲ್ತೆರೆಯಲೊಲ್ಲವು ಕೋಕಿನ ನಡೆಯಲೊಲ್ಲವು ಹಂಸೆ
ಕರೆಯಲೊಲ್ಲವು ಪಿಕಂ ನುಡಿಯಲೊಲ್ಲವು ಶುಕಂ ನಲಿಯಲೊಲ್ಲವು ಚಕೋರಿ
ನೆರೆಯಲೊಲ್ಲವು ಹರಿಣಿಯೊಲೆಯಲೊಲ್ಲವು ಕರಿಣಿ
ಪೊರೆಯಲೊಲ್ಲವು ಚಮರಿ ಮೆರೆಯಲೊಲ್ಲವು ಸಿಂಗ
ಮರರೆ ಜಾನಕಿಯ ಶೋಕಂ ತಮ್ಮದೆಂದಾಕೆಯಂಗಮಂ ನೋಡಿ ನೋಡಿ"[೭]

ಲಕ್ಷ್ಮೀಶನು ಪ್ರಕೃತಿಯನ್ನು ಸಚೇತನವೆಂಬಂತೆ ಚಿತ್ರಿಸಿರುವ ರೀತಿ ಒಂದು ವಿಶೇಷ ವಿಷಯ. ಮಾನವನೂ ಅವನ ಜೀವನದ ಆವರಣವೂ ಒಂದೇ ತತ್ತ್ವ ಧರಿಸಿದ ಹಲವು ರೂಪಗಳು. ಅವು ಬೇರೆ ಇವು ಬೇರೆಯಲ್ಲ. ಮಾನವನು ಮಾತ್ರ ಆತ್ಮವುಳ್ಳವನು. ಅವನೇ ಬೇರೆ ಸೃಷ್ಟಿಯಾದವನು ಎಂಬುದು ಕೆಲವು ಮತಗಳ ಸಿದ್ಧಾಂತ. ಸನಾತನ ಧರ್ಮ ಇದನ್ನು

ಒಪ್ಪುವುದಿಲ್ಲ, ನಾವು ಸಾಮಾನ್ಯವಾಗಿ ಜಡವೆಂದು ಭಾವಿಸುವ ಪ್ರಕೃತಿಯೂ ನಿಜವಾಗಿ ಚೇತನವುಳ್ಳದೆಂದೇ ಹೇಳಬೇಕು. ಇದನ್ನು ಜ್ಞಾನಿಯು ಯೋಗದಿಂದ ತಿಳಿಯುವನು! ವಿಜ್ಞಾನಿಯು ಪ್ರಯೋಗದಿಂದ ತೋರಿಸುತ್ತಾನೆ, ಇದು ಸಿದ್ಧಿಯಾದವನಿಗೆ ನಾನು ಎನ್ನುವುದು ಪ್ರಪಂಚದಷ್ಟು ಅಗಲವಾಗುತ್ತದೆ. ಆತನಿಗೆ ಪ್ರಪಂಚವೇ ನಾನು. ಈ ಸ್ಥಿತಿ ಎಲ್ಲರಿಗೂ ಸಾಧ್ಯವಲ್ಲ. ಜೇರೆ ಜೀವನದ ಕೊರಗನ್ನೂ ನಲಿವನ್ನೂ ವರ್ಣಿಸುತ್ತ ಈ ಕೊರಗನ್ನೂ ಈ ನಲಿವನ್ನೂ ಸೃಷ್ಟಿಯಲ್ಲಿ ನಿಜವಾಗಿ ಇರುವಂತೆ ಚಿತ್ರಿಸುವುದರಿಂದ ಓದುವವರು ಸೃಷ್ಟಿಯಲ್ಲಿರುವ ಒಂದು ಆತ್ಮದ ವಿಸ್ತರಣವನ್ನು ಕಾಣುವುದನ್ನು ಕಲಿಯುತ್ತಾರೆ. ಸೃಷ್ಟಿಯ ಯಾವ ಭಾಗ ನೊಂದರೂ ಸೃಷ್ಟಿಯೇ ನೋಯುತ್ತದೆ. ಇದನ್ನು ಕಲಿಸುವುದು ಕವಿ ಗುರುವಿನ ಕರ್ತವ್ಯ" ಎಂಬುದು ಮಾಸ್ತಿಯವರ ಅಭಿಪ್ರಾಯ. ವಿಮರ್ಶಕನೊಬ್ಬನ ಸೂಕ್ಷ್ಮಮತಿಯ ಹಾಗೂ ಜೀವನದ ಬಗ್ಗೆ ಆತನಿಗಿರಬೇಕಾದ ಕಲ್ಪನೆಯ ಪರಿಚಯವಾಗುತ್ತದೆ. ಈ ಸಂದರ್ಭದಲ್ಲಿ ಅನಾಥ ಶಿಶು ಚಂದ್ರಹಾಸ ಕಾಡಿನಲ್ಲಿದ್ದಾಗ ನಡೆದ ಘಟನೆಯನ್ನು ವರ್ಣಿಸುತ್ತಾ ಉದಾಹರಿಸಿರುವ ಪದ್ಯಗಳನ್ನು ಉದ್ಧರಿಸದ ಹೊರತು ಮನಸ್ಸಿಗೆ ತೃಪ್ತಿಯಾಗುವುದಿಲ್ಲ;

ಗರಿಗೆದರಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿ
ಲೆರಕೆಯಂ ಬೀಸಿ ಬಿಜ್ಜಣವಿಕ್ಕಿತಂಚೆ ತುಂ
ತುರನುದುರ್ಚಿತು ಸಾರಸಂ ಸಲಿಲದೊಳ್ನೆನೆದ ಪಕ್ಕಂಗಳಂ ಬಿದಿರ್ಚಿ
ಮರುಗಿ ಮೆಲ್ನುಡಿಯೊಳುಪಚರಿಸಿದುವು ಗಿಳಿಗಳ
ಕ್ಕರೊಳಳಿಗಳರ್ಭಕನ ರೋದನದ ಕೂಡಳುವ
ತೆರದೊಳ್ಮೊರೆದುವಲ್ಲಿ ಕರುಬರಿದ್ದೂರಿಂದ ಕಾಡೊಳ್ಳಿತೆನಿಸುವಂತೆ. [೮]

ಬಾಲಕನ ರೋದನದ ಕೂಡೆ ಬನದೇವಿಯ
ಗ್ರ್ಗಾಳಿ ತೀಡಿದೊಡೆ ಭೋರೆಂಬ ತರುಲತೆಗಳಿಂ
ಗೋಳಿಟ್ಟರಗ್ನಿ ಜನ ಭೂಗಗನ ವಾಯು ರವಿ ಶಶಿಗಳೆಣ್ದೆಸೆವೆಣ್ಗಳೂ
ಹೇಳಲೇನಡವಿಯ ಚರಾಚರಂಗಳ ಜೀವ
ಜಾಲಂಗಳುರೆ ಮರುಗುತಿರ್ದುವನಿತರೊಳೊಂದು
ಕೋಲಾಹಲದ ಘೋಷಮೆಲ್ಲಿಯುಂ ಕಿವಿಗಿಡಿದುದಾ ಮಹಾಕಾನದೊಳ್

ರವೀಂದ್ರನಾಥ ಠಾಕೂರ್ ಮತ್ತು ಪು.ತಿ. ನರಸಿಂಹಾಚಾರ್ ಅವರ ಕಾವ್ಯದ ಬಗ್ಗೆ ಮಾಸ್ತಿಯವರು ಬರೆದಿರುವ ವಿಮರ್ಶೆಗಳು ಗುಣಗ್ರಹಣವೇ ಹೊರತು ದೋಷ ದರ್ಶನದವಲ್ಲ. ಇಂಥ ಕಡೆ ಒಂದೆರಡು ಪ್ರಶಂಸೆಯ ಮಾತುಗಳು ನುಸುಳುವುದುಂಟು.

ಹೊಸಗನ್ನಡ ಕೃತಿ ವಿಮರ್ಶೆ ಪ್ರೋತ್ಸಾಹ ರೂಪದ್ದು. ಏಕೆಂದರೆ ಅದು ಸಾಹಿತ್ಯ ಸೃಷ್ಟಿಯ ಪ್ರಾರಂಭ ಕಾಲ. ಮಾಸ್ತಿಯವರ ಮಾತನ್ನೇ ಗಮನಿಸಿ: "ಜಳ್ಳನ್ನು ತೂರಿ ಕಾಳನ್ನು ತುಂಬಿಕೊಳ್ಳುವಂಥ ಕಾಲ ಅದಾಗಿರಲಿಲ್ಲ. ಸೃಜನಶೀಲತೆಗೆ ವಿಮರ್ಶೆಯ ಮೂಲಕ ಸ್ಫೂರ್ತಿ ನೀಡಿದ ಕಾಲ". ಮಾಸ್ತಿಯವರು ಬೇಂದ್ರೆಯವರ 'ನಾದಲೀಲೆ'ಗೆ ಬರೆದ ಮುನ್ನುಡಿ ಉನ್ಮೀಲನಾತ್ಮಕ ರಸ-ಗುಣಗ್ರಹಣ ವಿಮರ್ಶೆಯಾಗಿದೆ:

ಗಿಡಗಂಟೆಯಾ ಕೊರಳೊಳಗಿಂದ
ಹಕ್ಕಿsಗಳ ಹಾಡು, ಹೊರಟಿತು
ಹಕ್ಕಿsಗಳ ಹಾಡು
ಗಂಧರ್ವರಾ ಸೀಮೆಯಾಯಿತು
ಕಾಡಿsನಾ ನಾಡು ಕ್ಷಣದೊಳು
ಕಾಡಿನಾ ನಾಡು[೧೦]

"ಹಾಡುವ ಹಕ್ಕಿ ಗಿಡಗಂಟೆಯ ಕೊರಳು, ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಆ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಎಲ್ಲವೂ ಒಂದೇ ಆಗಿವೆ. ಬಾಳೆಲ್ಲ ಒಂದು ಎನ್ನುವುದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ, ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಬೇಂದ್ರೆ ಜನದ ಬಾಳಿನಲ್ಲಿ ಸೇರಿ ಬೆಳೆದಿರುವುದರಿಂದ, ಜನರ ಬಾಳನ್ನು ಚೆನ್ನಾಗಿ ನೋಡಿದ್ದಾರೆ; ಜನಪದ ಸಾಹಿತ್ಯಕ್ಕೆ ಮನಸ್ಸು ತೆತ್ತಿದ್ದಾರೆ. ಹಲವು ಓದನ್ನು ಓದಿ ಹಲವು ಕವಿಗಳ ಕೃತಿಗಳನ್ನು ನೋಡಿ ಪ್ರಚೋದಿತವಾಗುವ ಪಾಂಡಿತ್ಯದ ಕಾವ್ಯ ಒಂದು ರೀತಿ; ಇದು ಬಹು ಚೆನ್ನಾಗಿರಬಹುದು; ಆದರೆ ಜನದ ಬಾಳಿನಿಂದ, ಜನದ ನಡೆಯಿಂದ, ಜನರ ನುಡಿಯಿಂದ ಪ್ರಚೋದಿತವಾಗುವ ಕಾವ್ಯ, ಅದರಿಂದ ನೂರು ಮಡಿ ಹೆಚ್ಚು ಜೀವಂತ ವಾಗುತ್ತದೆ."[೧೧]

ಬೇಂದ್ರೆ ಕಾವ್ಯ promising ಅಲ್ಲ, ಅದರಲ್ಲಿ fulfilment ಎನ್ನುವುದು ಕಂಡಿದೆ. ಕನ್ನಡ ಜನತೆಯ ಕಾವ್ಯ ಎಷ್ಟು ಉತ್ತಮವಾದುದು ಎಂದು ಹೇಳುವುದಕ್ಕೆ ಈಗ ಹತ್ತುವರ್ಷದಿಂದ ನಮಗೆ ತುಂಬ ಸಾಮಗ್ರಿ ದೊರೆತಿದೆ. ಈ ಸಾಹಿತ್ಯದಲ್ಲಿ ಕಾಣುವ ಭಾವದ ಊಟ, ಮಾತಿನ ಔಚಿತ್ಯ, ಚಿತ್ರಕರ್ಮದ ಕಲೆ ಪ್ರಪಂಚದ ಅತ್ಯುತ್ತಮ ಸಾಹಿತ್ಯದ ಮಟ್ಟವನ್ನು ಮುಟ್ಟುತ್ತದೆ. ಎಲ್ಲ ಒಳ್ಳೆಯದಕ್ಕೂ ದಾರಿದ್ರ್ಯ ಅಡಸಿರುವ ನಮ್ಮ ಈಗಿನ ಸ್ಥಿತಿಯಲ್ಲಿ ಒಳ್ಳೆಯ ಮಾತಿಗೂ ಸ್ವಲ್ಪ ಬರವೇ ಬಂದಿದೆ. ಅದನ್ನು ಹೇಳಲು ಸಂಕೋಚಪಡಬೇಕಾಗಿಲ್ಲ," ಮಾಸ್ತಿಯವರ ಈ ವಿಮರ್ಶೆಯನ್ನು ಡಾ. ಯು.ಆರ್. ಅನಂತಮೂರ್ತಿಯವರು 'classic' ಎಂದಿದ್ದಾರೆ. ಬೇಂದ್ರೆಯವರು ಜಗತ್ತಿನ ಕಾವ್ಯಸಂಪತ್ತನ್ನು ಹೆಚ್ಚಿಸಿರುವ ಬಗೆಯನ್ನು ಮಾಸ್ತಿಯವರು ಎಳೆಎಳೆಯಾಗಿ ತೆರೆದು ತೋರಿದ್ದಾರೆ. ೧೯೩೮ರಲ್ಲಿಯೇ ಮಾಸ್ತಿಯವರು ಬೇಂದ್ರೆಯವರ ಕಾವ್ಯದ ಮಹತ್ವವನ್ನು ತಿಳಿದದ್ದು ಕನ್ನಡ ಸಾಹಿತ್ಯದ ಸುದೈವ.

ಹೊಸಗನ್ನಡ ಸಾಹಿತ್ಯ ಸೃಷ್ಟಿ ಹಾಗೂ ಬೆಳೆವಣಿಗೆಯ ಸಂದರ್ಭದಲ್ಲಿ ಮಾಸ್ತಿಯವರ ವಿಮರ್ಶೆ ತುಂಬ ಪ್ರಸುತ್ತವಾಗಿ ಕಂಡುಬರುತ್ತದೆ. ಅವರ ವಿಮರ್ಶಾ ಮನೋಧರ್ಮವನ್ನು ಅವರದೇ ಆದ ಮಾತುಗಳಿಂದ ಸಹೃದಯರಿಗೆ ತಿಳಿಸಿಕೊಡುವ ಪ್ರಯತ್ನವನ್ನು ಮಾಡಿದ್ದೇನೆ. ಇದರಿಂದ ಮಾಸ್ತಿಯವರ ವಿಮರ್ಶಾ ಕೃತಿಗಳನ್ನು ಓದುವ ಮೂಲಕ ಮೂಲ ಕೃತಿಗಳನ್ನು ಓದುಬೇಕೆಂಬ ಸ್ಫೂರ್ತಿ ಓದುಗರಿಗುಂಟಾದರೆ ಈ ನನ್ನ ಮಾತುಗಳು ಸಾರ್ಥಕವಾಗುತ್ತವೆ.

**ಅಡಿ ಟಿಪ್ಪಣಿಗಳು**

ದಿನಾಂಕ: ೨೮-೭-೧೯೯೫ರಂದು ಗೋಖಲೆ ವಿಚಾರ ಸಂಸ್ಥೆಯಲ್ಲಿ ನೀಡಿದ ದತ್ತಿ ಉಪನ್ಯಾಸ.

೧. ಜನನ: ೬-೬-೧೮೯೧; ಮರಣ: ೬-೬-೧೯೮೬.

೨. ಇವುಗಳಲ್ಲಿ ಪ್ರಾಚೀನ, ಅರ್ವಾಚೀನ ಕೃತಿಗಳ ವಿಮರ್ಶೆಯ ಲೇಖನಗಳಿವೆ, ಲಕ್ಷ್ಮೀಶನ ಜೈಮಿನಿ ಭಾರತ, ಕಾಳಿದಾಸನ ಮೇಘದೂತ ಇತ್ಯಾದಿ.

೩. ವಿಮರ್ಶೆ: ೪: ಮಾಸ್ತಿ ವೆಂಕಟೇಶ ಅಯ್ಯಂಗಾರ್; ಪ್ರ: ಜೀವನ ಕಾರ್ಯಾಲಯ, ಬೆಂಗಳೂರು; ೧೯೬೫: ಪುಟ: ೧೧೦

೪. ಅದೇ; ಪುಟ ೪೮-೭೮

೫. ಮಾಸ್ತಿಯವರು ೧೮ ನಾಟಕಗಳನ್ನು ರಚಿಸಿದ್ದಾರೆ.

೬. ವಾಙ್ಮಯ ವಿಹಾರ: ಜಿ. ಅಬ್ದುಲ್‌ಬಷೀರ್; ಪ್ರ: ಸನಾ ಪ್ರಕಾಶನ, ಬೆಂಗಳೂರು-೮೧; ೧೯೯೪; ಪುಟ ೧೭-೫೮ ನೋಡಿ.

೭. ವಿಮರ್ಶೆ : ೪ : ಮಾಸ್ತಿ; ಪುಟ ೧೭-೨೦ ನೋಡಿ.

೮. ಅದೇ; ಪುಟ ೧೮ ನೋಡಿ

೯. ಅದೇ; ಪುಟ ೧೮ ನೋಡಿ

೧೦. ವಿನಯ; ದ.ರಾ. ಬೇಂದ್ರೆ.

೧೧. ನಾದಲೀಲೆ; ಮುನ್ನುಡಿ; ಪುಟ xii; ಪ್ರ: ಸಮಾಜ ಪುಸ್ತಕಾಲಯ, ಧಾರವಾಡ; ೧೯೭೨

## ಅನುಬಂಧ

## ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಾಹಿತ್ಯ ಕೃತಿಗಳು

**ಕಾವ್ಯ:**

೧. ಬಿನ್ನಹ – ೧೯೨೨
೨. ಅರುಣ – ೧೯೨೪
೩. ತಾವರೆ – ೧೯೩೦
೪. ಚೆಲುವು – ೧೯೩೧
೫. ಮಲಾರ – ೧೯೩೩
೬. ಗೌಡರ ಮಲ್ಲಿ – ೧೯೪೦
೭. ರಾಮನವಮಿ – ೧೯೪೧
೮. ಮೂಕನ ಮಕ್ಕಳು– ೧೯೪೩
೯. ಸುನೀತ – ೧೯೪೬
೧೦. ಮನವಿ – ೧೯೫೦
೧೧. ನವರಾತ್ರಿ (೫ ಸಂಪುಟಗಳು)– ೧೯೪೪-೪೮
೧೨. ಸಂಕ್ರಾತಿ – ೧೯೬೯
೧೩. ಶ್ರೀರಾಮ ಪಟ್ಟಾಭಿಷೇಕ – ೧೯೭೨

**ಕಥಾ ಸಾಹಿತ್ಯ:**

೧೪. ಸುಬ್ಬಣ್ಣ (ಕಿರು ಕಾದಂಬರಿ) – ೧೯೨೮

೧೫. ಚೆನ್ನಬಸವ ನಾಯಕ (ಕಾದಂಬರಿ) – ೧೯೪೯

೧೬. ಚಿಕವೀರ ರಾಜೇಂದ್ರ (ಕಾದಂಬರಿ) – ೧೯೫೬

೧೭. ಶೇಷಮ್ಮ (ಕಾದಂಬರಿ) – ೧೯೭೬

೧೮. ಮಾತುಗಾರ ರಾಮಣ್ಣ (ಕಾದಂಬರಿ) –

೧೯. ಸಣ್ಣ ಕತೆಗಳು (೧೫ ಸಂಪುಟಗಳು) – ೧೯೨೦–೭೯

**ನಾಟಕ:**

೨೦. ತಾಳಿಕೋಟೆ – ೧೯೨೦

೨೧. ಶಾನ್ತಾ – ೧೯೨೩

೨೨. ಸಾವಿತ್ರಿ – ೧೯೨೩

೨೩. ಉಷಾ – ೧೯೨೭

೨೪. ಮಂಜುಳಾ – ೧೯೩೦

೨೫. ಶಿವಛತ್ರಪತಿ – ೧೯೩೨

೨೬. ಯಶೋಧರಾ – ೧೯೩೩

೨೭. ತಿರುಪಾಣಿ – ೧೯೩೭

೨೮. ಕಾಕನ ಕೋಟೆ – ೧೯೩೮

೨೯. ಮಾಸತಿ – ೧೯೫೩

೩೦. ಅನಾರ್ಕಳಿ – ೧೯೫೫

೩೧. ಪುರಂದರದಾಸ – ೧೯೬೪

೩೨. ಕನಕಣ್ಣ – ೧೯೬೫

೩೩. ಭಟ್ಟರ ಮಗಳು – ೧೯೬೯

೩೪. ಬಾನುಲಿ ದೃಶ್ಯಗಳು – ೧೯೭೪

೩೫. ಅಜ್ಜನ ದಾರಿ – ೧೯೮೩

೩೬. ಕಾಳಿದಾಸ – ೧೯೭೮

೩೭. ವಿಮಲಾ ಮರಿಯಾನ್ – ೧೯೮೫

**ವಿಮರ್ಶೆ ಹಾಗೂ ಉಪನ್ಯಾಸಗಳು:**

೩೮. ಸಾಹಿತ್ಯ – ೧೯೨೪

೩೯. ಕನ್ನಡದ ಸೇವೆ – ೧೯೩೦

೪೦. ಕರ್ನಾಟಕದ ಜನತೆಯ ಸಂಸ್ಕೃತಿ – ೧೯೩೧

೪೧. ಆದಿಕವಿ ವಾಲ್ಮೀಕಿ – ೧೯೩೮

೪೨. ತಾಯ್ನುಡಿಯ ತಮ್ಮಡಿ – ೧೯೪೪

೪೩. ಭಾರತ ತೀರ್ಥ – ೧೯೫೨

೪೪. ಕರ್ನಾಟಕದ ಜನಪದ ಸಾಹಿತ್ಯ – ೧೯೫೬

೪೫. ಕನ್ನಡದ ವೆಂಕ – ೧೯೫೭

೪೬. ಸಾಹಿತ್ಯದಿಂದ ಆಗುವ ಕೆಲಸ – ೧೯೭೧
೪೭. ವಿಚಾರ – ೧೯೭೧
೪೮. ವಿಮರ್ಶೆ (೪ ಸಂಪುಟಗಳು) – ೧೯೨೬–೬೫
೪೯. ಉತ್ತರಕಾಂಡ ವಿಚಾರ (೫ ಸಂಪುಟಗಳು) – ೧೯೪೬–೮೨

ಜೀವನಚರಿತ್ರೆ

೫೦. ರವೀಂದ್ರನಾಥ ಠಾಕೂರರು – ೧೯೩೫
೫೧. ಶ್ರೀ ರಾಮಕೃಷ್ಣ – ೧೯೩೬
೫೨. ಭಾವ (ಆತ್ಮಚರಿತ್ರೆ, ೨ ಸಂಪುಟಗಳು) – ೧೯೬೮–೬೯
೫೩. ನವರತ್ನರಾಮರಾವ್ – ೧೯೭೬

ಸಂಕೀರ್ಣ:

೫೪. ಪೂಜನ (ಮುನ್ನುಡಿಗಳ ಸಂಗ್ರಹ) – ೧೯೫೧
೫೫. ಚಿಂತನ – ೧೯೫೨
೫೬. ನಮ್ಮ ನುಡಿ (ಭಾಷಾಶಾಸ್ತ್ರ) – ೧೯೬೦
೫೭. ಸಾಹಿತ್ಯ ಲಾಲನೆ – ೧೯೬೭
೫೮. ಸಂಪಾದಕೀಯ (೫ ಸಂಪುಟಗಳು) – ೧೯೬೭
೫೯. ಸಾಹಿತ್ಯ ಪ್ರೇರಣೆ – ೧೯೭೫
೬೦. ಪಾತ್ರಗಳು – ೧೯೭೬
೬೧. ಅಂತರಗಂಗೆ – ೧೯೮೨
೬೨. ಧರ್ಮಸಂರಕ್ಷಣೆ – ೧೯೮೩
೬೩. ಪ್ರಸಂಗ (೫ ಸಂಪುಟಗಳು)
೬೪. ಅರ್ಚನ – ೧೯೭೬

ಭಾಷಾಂತರ:

೬೫. ಚಿತ್ರಾಂಗದ – ೧೯೪೫
೬೬. ಹಾಮ್ಲೆಟ್ – ೧೯೫೮
೬೭. ಚಂಡಮಾರುತ – ೧೯೫೯
೬೮. ಲಿಯರ್ ಮಹಾರಾಜ – ೧೯೫೯
೬೯. ಶ್ರೀಕೃಷ್ಣ ಕರ್ಣಾಮೃತ – ೧೯೫೯
೭೦. ದ್ವಾದಶ ರಾತ್ರಿ – ೧೯೬೦
೭೧. ಷೇಕ್ಸ್‌ಪಿಯರ್ ದೃಶ್ಯಗಳು (೩ ಸಂಪುಟಗಳು)– ೧೯೬೨–೬೪
೭೨. ಸಂಕ್ಷಿಪ್ತ ವಾಲ್ಮೀಕಿ ರಾಮಾಯಣ – ೧೯೮೧

ಸಂಪಾದಿತ:

೭೩. ಬಿಜ್ಜಳರಾಯ ಚರಿತೆ – ೧೯೫೪
೭೪. ಕರ್ನಾಟಕ ಭಾರತ ಕಥಾಮಂಜರಿ – ೧೯೫೮
೭೫. ಸರ್. ಎಂ. ವಿಶ್ವೇಶ್ವರಯ್ಯನವರು – ೧೯೬೦
೭೬. ರವೀಂದ್ರ ಪ್ರಶಸ್ತಿ – ೧೯೬೨

೭೭. ರವೀಂದ್ರ ಪೂಜನ – ೧೯೬೩
೭೮. ವಿಶ್ವಮಾನವನೆಡೆಗೆ – ೧೯೬೪

ಇಂಗ್ಲಿಷ್ ಕೃತಿಗಳು:

೭೯. Sayings of Basavanna – ೧೯೩೫
೮೦. Popular Culture in Karnataka– ೧೯೩೭
೮೧. The Poetry of Valmiki – ೧೯೪೦
೮೨. Subbanna – ೧೯೪೩
೮೩. Ravindranatha Tagore – ೧೯೪೬
೮೪. Channabasavanayaka – ೧೯೫೭
೮೫. The Mahabharatha – ೧೯೭೩
೮೬. Rajaji (2 Volumes) – ೧೯೭೫
೮೭. Essays, Addresses Etc. – ೧೯೭೫
೮೮. Short Stories (೫ Volumes) – ೧೯೪೩-೬೮
೮೯. Srimad Bhagavad-Gita-A study – ೧೯೭೮
೯೦. Kalidasa – ೧೯೮೦
೯೧. Addresses – ೧೯೮೦
೯೨. Thinking of my life – ೧೯೮೩
೯೩. Thought on Religion – ೧೯೮೩





# ಭಾಷೆಯ ವ್ಯವಹಾರ ರೂಪಗಳು, ಶಾಸ್ತ್ರ ಮತ್ತು ಸಾಹಿತ್ಯ – ಇವುಗಳ ವಿಚಾರ

• ದಿ. ಡಾ. ಡಿ.ವಿ. ಗುಂಡಪ್ಪ

ಹಿಂದಿನ ಉಪನ್ಯಾಸದಲ್ಲಿ ಭಾಷೆಯ ಸ್ವರೂಪದ ಸ್ವಭಾವಗಳನ್ನು ಕುರಿತು ಸ್ವಲ್ಪ ಮಟ್ಟಿಗೆ ವಿಚಾರ ಮಾಡಿದ್ದಾಯಿತು. ಇನ್ನು ಭಾಷೆಯ ವ್ಯವಹಾರ ರೂಪಗಳನ್ನು ಕುರಿತು ಸ್ವಲ್ಪ ದೂರ ವಿಚಾರ ಮಾಡಬೇಕಾಗಿದೆ.

## ಬಾಯಮಾತು

ಮಾತಿನ ಉಪಯೋಗವು ಬಾಯಿಯದು, ಬರೆಹದ್ದು–ಎಂದು ಎರಡು ಬಗೆಯದಷ್ಟೆ. ಇದರಲ್ಲಿ ಬಾಯಮಾತು ಲಕ್ಷಣ ಸಮನ್ವಯಕ್ಕೆ ಸಿಕ್ಕತಕ್ಕುದಲ್ಲ. ಇದರಿಂದ ಅದು ಭಾಷಾಭಿಮಾನಿಗಳ ಉಪೇಕ್ಷೆಗೆ ಅರ್ಹವಾದುದೆಂದು ಅರ್ಥವಲ್ಲ. ಏಕೆಂದರೆ, ಜನಜೀವನದ ಮತ್ತು ಭಾಷಾಜೀವನದ ಚೇಷ್ಟಿತಗಳು – ಅವುಗಳ ಚಲನವಲನಗಳು– ಗೊತ್ತಾಗುವುದು ಬಾಯಮಾತಿನಿಂದಲೇ. ಹಿಂದೆ, ಈ ಲೇಖನದ ಅಗ್ರಭಾಗದಲ್ಲಿ, ಉದಾಹೃತವಾದ ವೇದಮಂತ್ರದ ಪ್ರಕಾರ ಬಾಯಮಾತೂ ಸಹ ವಾಗ್ದೇವತೆಯ ಒಂದು ಅವತಾರವೇ ತಾನೆ? ಮರಕ್ಕೆ ಎಲೆಗಳು ಹೇಗೆಯೋ ಭಾಷೆಗೆ ಬಾಯಮಾತು ಹಾಗೆಂದು ಹೇಳಬಹುದು. ಮರದ ಜೀವನದ ಬೇರುಗಳೂ ಮುಂಡವೂ ಅತ್ಯಂತಾವಶ್ಯಕವಾದವು; ಹೂವು ಹಣ್ಣುಗಳು ಆ ಜೀವನವು ಸಾರ್ಥಕವೆನಿಸಲು ಅವಶ್ಯಕವಾದುವು; ಎಲೆಗಳಾದರೋ ಮರದ ಬಾಳಿನಲ್ಲಿ ಅಷ್ಟು ಮುಖ್ಯವೆಂದು ಸಾಮಾನ್ಯವಾಗಿ ನಮಗೆ ತೋರುವುದಿಲ್ಲ. ಆದರೆ ಎಲೆಚಿಗುರುಗಳನ್ನೆಲ್ಲ ಕಿತ್ತುಹಾಕಿದರೆ ಆ ಮರವು ಒಣಗುವುದು ಖಂಡಿತವೇ ಅಲ್ಲವೆ? ಅಲ್ಲದೆ, ಮರಕ್ಕೆ ಸೌಂದರ್ಯವನ್ನೂ, ಆಶ್ರಯದಾಯಕ ಶಕ್ತಿಯನ್ನೂ ಕೊಡತಕ್ಕುವು

ಎಲೆಗಳು. ಎಲೆಗಳು ಬೇರು ಮುಂಡಗಳಷ್ಟು ದೀರ್ಘಕಾಲವಿರತಕ್ಕುವಲ್ಲ; ಹೂವು ಕಾಯಿಗಳಷ್ಟು ಸ್ವಲ್ಪಕಾಲ ಮಾತ್ರವೇ ಇರತಕ್ಕುವೂ ಅಲ್ಲ, ಹುವ್ವುಹಣ್ಣುಗಳು ಒಂದು ಋತುವಿನಲ್ಲಿ ಮಾತ್ರ ಇರುವುವು; ಎಲೆಗಳು ಯಾವಾಗಲೂ ಇರುವುವು. ಬೇರು ಮುಂಡಗಳು ಸಾಮಾನ್ಯವಾದ ಗಾಳಿಯ ಹೊಡೆತಕ್ಕೆ ಕದಲುವುದಿಲ್ಲ; ಎಲೆಗಳು ಗಾಳಿಯ ಪ್ರತಿಯೊಂದು ಮೃದುಚಲನೆಯನ್ನೂ ಕೂಡ ತೋರಿಸುವುವು. ಬಾಯಮಾತು ಇಂತಹ ಎಲೆಗಳಂತೆ. ಭಾಷಾವೃಕ್ಷಕ್ಕೆ ಅದರ ಶಬ್ದಸಾಮಾಗ್ರಿಯೇ ಬೇರು; ಪೂರ್ವದಿಂದ ಬಂದಿರುವ ಪದಪ್ರಯೋಗಗಳೇ ಮುಂಡ; ಹೊಸ ಹೊಸದಾಗಿ ಹುಟ್ಟುವ ಕಾವ್ಯಪ್ರಬಂಧಗಳೇ ಅದರ ಹುವ್ವುಹಣ್ಣುಗಳು; ಆ ಭಾಷೆಯನ್ನು ಉಪಯೋಗಿಸುವವರ ಜೀವನದಲ್ಲಿ ಉಂಟಾಗುವ ಹೊಸ ಹೊಸ ವೃತ್ತಿ ಪ್ರವೃತ್ತಿಗಳೇ ಗಾಳಿಯ ಹೊಡೆತಗಳು; ಅವರು ವಾಡಿಕೆಯಾಗಿ ಆಡುವ ಮಾತೇ ಅದರ ಎಲೆ. ಆ ಎಲೆಯ ಮೇಲೆ ಧೂಳು. ಕೊಳೆ, ಹುಳು ಇವು ಕೂಡದಂತೆ ಅದನ್ನು ಕಾಪಾಡಿದರೆ, ಅದು ಮರವನ್ನು ಕಾಪಾಡಿ ಅದರ ಜೀವನವನ್ನು ಸಾರ್ಥಕ ಪಡಿಸಲು ಸಹಾಯವಾಗುವುದು. ಆದಕಾರಣ ಭಾಷೆಯಲ್ಲಿ ಅಭಿಮಾನವುಳ್ಳವರು ಜನಸಾಮಾನ್ಯರ ಬಾಯಮಾತನ್ನು ಕೂಡಿದಷ್ಟು ಶುದ್ಧವಾಗಿಡಲು ಪ್ರಯತ್ನ ಮಾಡಬೇಕು.

ಒಬ್ಬ ಮನುಷ್ಯನು ಸಾಮಾನ್ಯವಾಗಿ ಬದುಕುವ ರೀತಿಯನ್ನು ತಿಳಿಯಬೇಕಾದರೆ ಅವನ ಮನೆಯಲ್ಲಿ ಮದುವೆ ಮುಂಜಿಗಳಾಗುವ ಅಥವಾ ಬಂಧುಬಳಗಗಳು ಬಂದಿರುವ ಕಾಲದಲ್ಲಿ ಮಾತ್ರವೇ ಅವನನ್ನು ನೋಡುವುದಕ್ಕಿಂತ, ಸಾಧಾರಣ ದಿನಗಳಲ್ಲಿಯೂ ಅವನ ಮನೆಗೆ ಹೋಗಿ ಅವನ ಊಟ ಉಪಚಾರಗಳ ಬಗೆಯನ್ನು ನೋಡಿದರೆ ನಿಜಸ್ಥಿತಿಯು ಮತ್ತಷ್ಟು ಚೆನ್ನಾಗಿ ತಿಳಿದುಬರುವುದು. ಗ್ರಂಥಗಳೂ ಸಭೆಯಲ್ಲಾಗುವ ಉಪನ್ಯಾಸಗಳೂ ಮದುವೆಯ ಮನೆಯಲ್ಲಿಯ ಮನುಷ್ಯನಂತೆ-ದರ್ಬಾರಿನಲ್ಲಿರುವ ಸಾಮಾಜಿಕನಂತೆ. ಅವನಿಗೆ ಮನೆಯಲ್ಲಿ ಭೋಜನಕ್ಕೆ ಅಭಾವವಾಗಿದ್ದರೂ ಸಭೆಯಲ್ಲಿ ಅವನು ನಗುಮುಖವನ್ನೇ ಹಾಕಿಕೊಂಡಿರಬೇಕು; ಮನೆಯಲ್ಲಿ ಹರಕು ಬಟ್ಟೆಯನ್ನುಟ್ಟರೂ ಹೊರಗಡೆ ಅಂದವಾದ ಉಡುಪನ್ನೇ ಧರಿಸಿರಬೇಕು; ಮನೆಯ ಗೋಷ್ಠಿಯಲ್ಲಿ ಹದ್ದಿಲ್ಲದೆ ಹರಟಿದರೂ ಸಭೆಯಲ್ಲಿ ಗಂಭೀರ ಭಾವವನ್ನು ತಾಳಿರಬೇಕು. ಭಾಷೆಯೂ ಹಾಗೆಯೇ ಉಪನ್ಯಾಸ ಪ್ರಬಂಧಗಳಲ್ಲಿ ಒಂದು ತೆರನಾದ ಮಾನಮರ್ಯಾದೆಗಳನ್ನು ತೋರಲೇಬೇಕೆಂಬ ಕಟ್ಟುಪಾಡು ಇದೆ; ಬಾಯಮಾತಿಗೆ ಆ ಕಟ್ಟುಪಾಡು ಅಷ್ಟು ಖಂಡಿತವಾಗಿಲ್ಲ. ಆದಕಾರಣ ಭಾಷೆಯ ಅಂದಚಂದಗಳೂ ಕುಂದು ಕೊರತೆಗಳೂ ಗುಟ್ಟು ಗೋಪ್ಯಗಳೂ ಬಾಯಮಾತಿನಲ್ಲಿ ಹೊರಬೀಳುವಂತೆ ಬರೆಹದ ಮಾತಿನಲ್ಲಿ ಹೊರಬೀಳುವುದಿಲ್ಲ.

ಇಷ್ಟೇ ಅಲ್ಲದೆ ಬರೆಹದ ಮಾತಿನ ವಿಷಯ ರೀತಿಗಳೆಂತವೆಂಬುದನ್ನು ಬಾಯಮಾತು ಬಹುಮಟ್ಟಿಗೆ ನಿರ್ಧರಿಸುತ್ತದೆ. ಈ ದಿನ ಜನರ ಬಾಯಮಾತಿಗೆ ವಿಷಯವಾಗಿರುವ ವಸ್ತುವು ನಾಳೆ ಗ್ರಂಥಕ್ಕೆ ವಿಷಯವಾಗುವುದು; ಈ ದಿನ ಬಾಯಮಾತಿನಲ್ಲಿ ಕಾಣಬರುವ ಪ್ರಯೋಗಗಳು ನಾಳೆ ಗ್ರಂಥದಲ್ಲಿ ಕೊಂಚಮಟ್ಟಿಗಾದರೂ ಕಾಣಬರುವುವು. ಏಕೆಂದರೆ ತನ್ನ ಕಾಲದ ಜನರ ಮಾತು ಕಥೆಗಳ ತರಗತಿಯನ್ನು ಸಂಪೂರ್ಣವಾಗಿ ಮೀರಿ ಬಲು ಮೇಲಕ್ಕೆ ಹೋಗುವುದು ಯಾವ ಗ್ರಂಥಕರ್ತನಿಗೂ ಸಾಧ್ಯವಾಗದು; ಸ್ವಲ್ಪ ಮಟ್ಟಿಗಾದರೂ ಕವಿಯು ತನ್ನ

ಸುತ್ತುಮುತ್ತಲಿರುವವರ ನಡೆನುಡಿಗಳಿಂದ ಅಂಶಗಳನ್ನು ತೆಗೆದುಕೊಳ್ಳಲೇ ತೆಗೆದುಕೊಳ್ಳುವನು. ಹೀಗಿರುವುದರಿಂದ ಸಾಮಾನ್ಯ ಜನರ ಬಾಯಮಾತಿನಲ್ಲಿ ಎಷ್ಟು ಸಲ್ಲಕ್ಷಣಗಳಿದ್ದರೆ ಭಾಷೆಗೂ, ಆ ಮೂಲಕ ಆ ಭಾಷೆಯನ್ನಾಡುವ ಜನರಿಗೂ ಅಷ್ಟು ಒಳ್ಳೆಯದಾಗುವುದು.

## ಗ್ರಂಥವೆಂದರೇನು?

ಬರೆಹದ ಮಾತೆಂದರೆ ಸದ್ಗ್ರಂಥಗಳು. ಸಭೆ ಸಂಘಗಳಲ್ಲಿ ಆಗುವ ಉಪನ್ಯಾಸಗಳು ಬಾಯ ಮಾತಾದರೂ ಈ ಜಾತಿಗೇ ಸೇರಬಹುದು. ವರ್ತಕರ ಲೆಕ್ಕಪತ್ರ, ಮನೆಯ ಕ್ಷೇಮಸಮಾಚಾರದ ಕಾಗದಗಳು ಇವೇ ಮೊದಲಾದ ವೈಯಕ್ತಿಕ ಪ್ರಸಂಗಗಳು ಬರೆಹದ ಮಾತೇ ಆದರೂ ಈ ಜಾತಿಗೆ ಸೇರಬಹುದಾದುವಲ್ಲ. ಯಾವ ವಾಕ್ಯಸಮೂಹವು ಅದನ್ನು ಹೇಳಿದ ಅಥವಾ ಬರೆದ ಒಬ್ಬರಿಬ್ಬರ ಪ್ರಯೋಜನಕ್ಕೆ ಮಾತ್ರವೇ ಅಲ್ಲದೆ ಇತರ ಬಹುಜನರಿಗೆ ಕೊಂಚಕಾಲವಾದರೂ ಕೊಂಚ ಮಟ್ಟಿಗಾದರೂ ಪ್ರಯೋಜನಕರವಾಗುವುದಾಗಿ, ಅವರು ಶ್ರದ್ಧೆಯಿಂದ ಓದಿ ವಿಚಾರಮಾಡಲು ಅರ್ಹವಾಗಿರುವುದೋ ಅಂತಹುದನ್ನು ನಾವು ಇಲ್ಲಿ ಗ್ರಂಥವೆಂದು ಎಣಿಸಬಹುದು. ಪುಸ್ತಕಗಳೆಲ್ಲವೂ ಗ್ರಂಥಗಳಲ್ಲ; ನಮ್ಮ ಕಾಲದಲ್ಲಿ ಮುದ್ರಣ ಸೌಕರ್ಯಗಳು ಹೆಚ್ಚುತ್ತಿರುವುದರಿಂದ ಸಿಕ್ಕಿಸಿಕ್ಕಿದವರು ತಮತಮಗೆ ತೋರಿದುದನ್ನೆಲ್ಲ ಬರೆದು ಅಚ್ಚೊತ್ತಿಸಬಹುದು. ಇಂತಹವುಗಳಲ್ಲಿ ಒಂದೆರಡು ದಿನವಿದ್ದು ಲುಪ್ತವಾಗತಕ್ಕ ಪುಸ್ತಕಗಳು ಎಷ್ಟೋ ಇರುತ್ತವೆ. ನಮ್ಮ ಪ್ರಕೃತ ಪ್ರಸಂಗವು ಅವುಗಳಿಗೆ ಅಷ್ಟು ಹೆಚ್ಚಾಗಿ ಸಂಬಂಧಪಟ್ಟುದಲ್ಲ. ನಾವು ಒಂದು ಸಲ ಓದಿದ ಬಳಿಕ ಮತ್ತೊಂದು ಸಲ ನೋಡಬೇಕೆಂದು ನಮ್ಮಲ್ಲಿ ಇಚ್ಛೆ ಹುಟ್ಟಿಸುವುದೂ, ಅಥವಾ ಬಿಸುಡದೆ ಎತ್ತಿಟ್ಟು ಮತ್ತಾರಿಗಾದರೂ ನೋಡಲಿಕ್ಕೆ ಕೊಡಬೇಕೆಂದೆನ್ನಿಸುವುದೂ ಸದ್ಗ್ರಂಥದ ಲಕ್ಷಣವೆಂದು ನಾವು ಸ್ಥೂಲವಾಗಿ ಇಟ್ಟುಕೊಳ್ಳಬಹುದು. ಗ್ರಂಥವೆನಿಸುವುದಕ್ಕೆ ಒಂದು ಬಗೆಯ ವಿಷಯಗೌರವವೂ ರೀತಿಸೌಷ್ಠವವೂ ಇರಬೇಕು.

## ಸಾಹಿತ್ಯ–ಶಾಸ್ತ್ರ

ಗ್ರಂಥಗಳಲ್ಲಿ ಸಾಹಿತ್ಯವೆಂದೂ ಶಾಸ್ತ್ರವೆಂದೂ ಸ್ಥೂಲವಾಗಿ ಎರಡು ಜಾತಿಗಳು ಕಾಣಬರುತ್ತವೆ. ಯಾವ ಗ್ರಂಥಗಳು ವಾಚಕರಿಗೆ ಚಿತ್ತಸಮುನ್ನತಿಯನ್ನುಂಟುಮಾಡಿ ಅವರ ಧರ್ಮಾಧರ್ಮ ವಿವೇಚನೆಗೆ ದಾರಿಬಿಡಿಸುವುವೋ ಅವುಗಳನ್ನು ಸಾಹಿತ್ಯವರ್ಗಕ್ಕೆ ಸೇರಿಸಬಹುದು. ಯಾವ ಗ್ರಂಥಗಳು ವಾಚಕರ ವಸ್ತುಜ್ಞಾನವನ್ನು ಹೆಚ್ಚುಮಾಡಿ ಅವರ ಬಹಿರಂಗದ ಆಚಾರ ವ್ಯವಹಾರಗಳಿಗೆ ಸಾಕ್ಷಾತ್ತಾಗಿ ಉಪಯುಕ್ತವಾಗುವ ತಿಳಿವಳಿಕೆಯನ್ನು ಉಂಟುಮಾಡಿಕೊಡುವುವೋ ಅವುಗಳನ್ನು ಶಾಸ್ತ್ರವರ್ಗಕ್ಕೆ ಸೇರಿಸಬಹುದು. ಸಾಹಿತ್ಯದ ಕಾರ್ಯಕ್ಷೇತ್ರವು ಮನಸ್ಸು; ಶಾಸ್ತ್ರದ ಕಾರ್ಯಕ್ಷೇತ್ರವು ಬುದ್ಧಿ. ಮನೋಬುದ್ಧಿಗಳೆರಡನ್ನೂ ಸಂಪೂರ್ಣವಾಗಿ ಪ್ರತ್ಯೇಕಗೊಳಿಸಲು ಕೆಲವು ಸಂದರ್ಭಗಳಲ್ಲಿ ಆಗುವುದಿಲ್ಲ. ಅಂತಹ ಸಂದರ್ಭಗಳಿಗೆ ಸಬಂಧಪಡುವ ಗ್ರಂಥಗಳು ಸಾಹಿತ್ಯವರ್ಗಕ್ಕೆ ಸೇರತಕ್ಕುವಾಗಿಯಾದರೂ ಇರಬಹುದು; ಅಥವಾ ಶಾಸ್ತ್ರವರ್ಗಕ್ಕೆ ಸೇರತಕ್ಕುವಾಗಿಯಾದರೂ ಇರಬಹುದು. ಆದಕಾರಣ ಸಾಹಿತ್ಯವನ್ನು ಶುದ್ಧಕಾವ್ಯ, ಮಿಶ್ರಕಾವ್ಯ ಎಂದು ಎರಡುಬಗೆಯಾಗಿಯೂ, ಶಾಸ್ತ್ರವನ್ನು ಲೌಕಿಕಶಾಸ್ತ್ರ ಆಧ್ಯಾತ್ಮಿಕಶಾಸ್ತ್ರ ಎಂದು ಎರಡು



ಬಗೆಯಾಗಿಯೂ ವಿಂಗಡಿಸಬಹುದು. ಶುದ್ಧಕಾವ್ಯವು ರಾಮಾಯಣ ಶಾಕುಂತಲಗಳಂತೆ ರಸಪ್ರಧಾನವಾದುದು; (ರಸವೆಂದರೇನೆಂಬುದನ್ನು ಮುಂದೆ ವಿಚಾರಮಾಡಬಹುದು) ಮಿಶ್ರಕಾವ್ಯವು ಭಾರತ ಹಿತೋಪದೇಶಗಳಂತೆ ಅಧ್ಯಾತ್ಮ ವಿಷಯಗಳನ್ನೂ ನೀತಿ ವಿಷಯಗಳನ್ನೂ ಸರಸರೀತಿಯಲ್ಲಿ ಬೋಧಿಸುವುದು. ಲೌಕಿಕ ಶಾಸ್ತ್ರಗಳೆಂಬುವು ಭೌತಿಕಶಾಸ್ತ್ರ, ರಾಸಾಯನಿಕಶಾಸ್ತ್ರ, ಭೂಗರ್ಭಶಾಸ್ತ್ರ, ಜ್ಯೋತಿಶ್ಯಾಸ್ತ್ರ ಮೊದಲಾದುವುಗಳಂತೆ ಬಾಹ್ಯಪ್ರಪಂಚದ ವಸ್ತಗಳನ್ನು ಕುರಿತು ವಿಚಾರಮಾಡತಕ್ಕುವು; ಅಥವಾ ಅರ್ಥಶಾಸ್ತ್ರ, ವ್ಯವಹಾರಶಾಸ್ತ್ರ (ಲಾ, ಕಾನೂನು), ರಾಜ್ಯಮೀಮಾಂಸೆ, ಮೊದಲಾದವುಗಳಂತೆ ಸಮಾಜವ್ಯವಸ್ಥೆಗಳನ್ನು ಕುರಿತು ವಿಚಾರಮಾಡತಕ್ಕುವು. ಇವು ಮನುಷ್ಯನ ಪಾರಲೌಕಿಕ ಸ್ಥಿತಿಗೆ ಸಂಬಂಧಪಟ್ಟ ವಿಚಾರಗಳನ್ನು ಸಾಕ್ಷಾತ್ತಾಗಿಯೂ ಪ್ರಧಾನವಾಗಿಯೂ ತೆಗೆದುಕೊಳ್ಳುವುದಿಲ್ಲ. ಈ ಶಾಸ್ತ್ರಗಳನ್ನಭ್ಯಸಿಸುವವರು ಅನುಸರಿಸಬೇಕಾದ ನೀತಿ ಯಾವುದೂ ಇಲ್ಲವೆಂದು ಅರ್ಥವಲ್ಲ. ಆದರೆ ಆ ನೀತಿಯನ್ನು ಅವರು ಸರ್ವಸಾಮಾನ್ಯವಾದ ನೀತಿಶಾಸ್ತ್ರದಿಂದಲೇ ತಿಳಿಯುವರು. ವೈದ್ಯಶಾಸ್ತ್ರವು ರೋಗದ ವಿಚಾರವನ್ನು ಮಾಡುವುದೇ ಹೊರತು ರೋಗಿಯ ಪುಣ್ಯಪಾಪಗಳ ಗೊಡವೆಗೆ ಹೋಗುವುದಿಲ್ಲ. ರಾಜಬೀದಿಗಳಲ್ಲಿ ಹೋಗುವವರು ಎಡಗಡೆಗೂ ಬರತಕ್ಕವರು ಬಲಗಡೆಗೂ ಇರಬೇಕೆಂದು ಮಾಡಿರುವ ವಿಧಿಯ ಪರ್ಯವಸಾನವು ಪರಲೋಕದವರೆಗೂ ಹತ್ತುವುದಿಲ್ಲ. ಆಧ್ಯಾತ್ಮಿಕ ಶಾಸ್ತ್ರಗಳಾದರೋ ಧರ್ಮಾಧರ್ಮಗಳು ಭಗವದುಪಾಸನಾಕ್ರಮಗಳು ಜೀವನ ಊರ್ಧ್ವಗತಿ ಅಧೋಗತಿಗಳು ಇವುಗಳನ್ನು ಕುರಿತವು. ವೇದವೇದಾಂತಗಳೂ ಸ್ಮೃತಿ ಪುರಾಣಗಳೂ ಈ ಭಾಗಕ್ಕೆ ಸೇರತಕ್ಕುವು. ಈ ಅಧ್ಯಾತ್ಮಶಾಸ್ತ್ರಕ್ಕೂ ಸಾಹಿತ್ಯ ಅಥವಾ ಕಾವ್ಯಕ್ಕೂ ಗಾಢವಾದ ಸಂಬಂಧವಿರುವುದು; ಏಕೆಂದರೆ ಅವೆರಡೂ ಮಾನವನ ಆಶಯಗಳನ್ನೂ ಗುಣಗಳನ್ನೂ ನಡತೆಯನ್ನೂ ತಿದ್ದಲು ಬೇರೆ ಬೇರೆ ವಿಧಗಳಲ್ಲಿ ಪ್ರಯತ್ನಿಸುತ್ತವೆ. ಯಾವ ಗ್ರಂಥವು ಸಾಹಿತ್ಯದ ಸಾಧನಸಾಮಗ್ರಿಗಳಿಂದ ಮನಸ್ಸಿನಲ್ಲಿ ರಸೋತ್ಪಾದನೆಮಾಡಿ ಆ ಮೂಲಕ ಬುದ್ಧಿಯನ್ನೆಚ್ಚರಿಸಿ ಅನಂತರ ಧರ್ಮವಿಷಯ ಭಗವದ್ವಿಷಯಗಳನ್ನೂ ಬೋಧಿಸುವುದೋ ಅದನ್ನು ಮಿಶ್ರ ಕಾವ್ಯವೆನಿಸಬಹುದು. ಈ ನಮ್ಮ ಸಾಹಿತ್ಯವಿಭಾಗ ಕ್ರಮವೂ ಶಾಸ್ತ್ರವಿಭಾಗ ಕ್ರಮವೂ ಸ್ವಲ್ಪ ನವೀನವಾಗಿ ಕಾಣಬಹುದು. ಆದರೂ ಸಾವಧಾನದಿಂದ ವಿಚಾರಮಾಡುವವರಿಗೆ ನಮ್ಮ ಕಾರಣಗಳೇನೆಂಬುದು ಮುಂದೆ ಮುಂದೆ ಸ್ಪಷ್ಟವಾಗಿ ಅವು ಅನುಚಿತಗಳಲ್ಲವೆಂದು ತೋರಬಹುದೆಂದು ನಂಬಿರುವೆವು.

ಮನುಷ್ಯನು ಸಾಮಾನ್ಯವಾಗಿ ಬಹಿರಂಗದಿಂದ ಯಾವುದಾದರೊಂದು ಕೆಲಸವನ್ನು ಮಾಡಲುಪಕ್ರಮಿಸುವುದಕ್ಕೆ ಮುಂಚೆ ಅವನ ಅಂತರಂಗದಲ್ಲಿ ಎರಡು ಬಗೆಯ ಕಾರ್ಯಗಳು ನಡೆದಿರುತ್ತವೆ. ೧) ಆ ಕೆಲಸಕ್ಕೆ ಸಂಬಂಧಪಟ್ಟ ವಸ್ತುಗಳನ್ನು ಕುರಿತ ತಿಳಿವಳಿಕೆ. ೨) ಆ ತಿಳಿವಳಿಕೆಯಿಂದುಂಟಾದ ಇಷ್ಟಾನಿಷ್ಟಗಳ ದ್ವಾರಾ ಹುಟ್ಟಿದ ರಾಗದ್ವೇಷಗಳು. ಇವುಗಳಲ್ಲಿ ಮೊದಲನೆಯದು ಬುದ್ಧಿಯೆಂಬ ಅಂತರಂಗದ್ರವ್ಯದ ಕೆಲಸವೆಂದೂ ಎರಡನೆಯದು ಮನಸ್ಸೆಂಬ ಅಂತರಂಗದ್ರವ್ಯದ ಕೆಲಸವೆಂದೂ ಸಂಕೇತವುಂಟು. ಮನಸ್ಸು ಸ್ನೇಹ, ಕ್ರೋಧ, ಶೋಕ, ಮೋಹ ಮೊದಲಾದ ಆವೇಶವನ್ನುಂಟುಮಾಡಿಸುವುದು; ಬುದ್ಧಿಯು ಆ ಆವೇಶಗಳಿಗೆ ಪರಿಣಾಮವನ್ನುಂಟುಮಾಡಿಸುವುದು. ಶತ್ರುವನ್ನು ಕಂಡೊಡನೆಯೇ ಮನಸ್ಸು ರೋಷವನ್ನು

ಸ್ಥೂಲವಸ್ತುಗಳು ಹೊರಗಿನವು. ಸೃಷ್ಟಿಕರ್ತನ ಮಹಿಮೆಯು ಈ ಎರಡುಬಗೆಯ ಪ್ರಪಂಚಗಳಲ್ಲಿಯ ವ್ಯಾಪಾರಗಳಿಂದಲೂ ಅನುಮೇಯವಾಗಿರುವುದು. ಹೊರಗೆ ಕಾಣುವ ಸೌಂದರ್ಯ ವೈಚಿತ್ರ್ಯಗಳನ್ನು ಪರಿಶೀಲಿಸಿ ಅವುಗಳ ಮೂಲತತ್ತ್ವಗಳನ್ನು ಹುಡುಕುವ ಬುದ್ಧಿ ಕಾರ್ಯವಿಜ್ಞಾನ –"ಸೈನ್ಸ್" ಎಂಬ ಹೆಸರನ್ನಿಟ್ಟುಕೊಳ್ಳಬಹುದು. ಒಳಗೆ ತೋರುವ ಭಾವ ವಿಶೇಷಗಳನ್ನು ಬಣ್ಣಿಸಿ ಅವುಗಳ ಪರಿಣಾಮವನ್ನು ತಿಳಿಸಿಕೊಡುವ ಪ್ರತಿಭಾಕಾರ್ಯವನ್ನು "ಕಲೆ"–ಆರ್ಟ್– ಎಂದು ಕರೆಯಬಹುದು.

ವಿಜ್ಞಾನವೂ ಕಲೆಯೂ ಅನುಸರಿಸುವ ದಾರಿಗಳು ಬೇರೆ ಬೇರೆ. ಅವು ಉಪಯೋಗಿಸುವ ಸಾಧನಗಳೂ ಬೇರೆ ಬೇರೆ. ಆದರೆ ಅವು ಪರಸ್ಪರ ವಿರೋಧಿಗಳಲ್ಲ; ಅನುಬಂಧಿಗಳೇ. ಪರಮೇಶ್ವರನ ಶಕ್ತಿಯಾದ ಪ್ರಕೃತಿದೇವಿಯ ಕೀರ್ತಿಯನ್ನೇ ಅವೆರಡೂ ಎರಡು ಬಗೆಗಳಲ್ಲಿ ಹಾಡುತ್ತವೆ. ಕೆಲವರಿಗೆ ಒಂದು ಬಗೆಯ ಹಾಡಿಕೆಯೂ ಕೆಲವರಿಗೆ ಇನ್ನೊಂದು ಬಗೆಯ ಹಾಡಿಕೆಯೂ ಕೆಲವರಿಗೆ ಎರಡು ಬಗೆಯ ಹಾಡಿಕೆಗಳೂ ಬೇಕಾಗಬಹುದು.

ಅಂತರಂಗಪ್ರಪಂಚದ ವ್ಯಾಪಾರಗಳನ್ನು ಬಹಿರಂಗಗಳೂ ಬಹಿರಂಗದ ವ್ಯಾಪಾರಗಳನ್ನು ಅಂತರಂಗಗಳೂ ಕೆಲಕೆಲವು ಸಂದರ್ಭಗಳಲ್ಲಿ ಸ್ವಲ್ಪಮಟ್ಟಿಗೆ ಸೂಚಿಸಲಾಗುವುದು. ಮನಸ್ಸಿನಲ್ಲಿ ಕ್ರೋಧವು ನೆಲೆಗೊಂಡಾಗ ಕಣ್ಣು ಕೆಂಪೇರಿ, ತುಟಿಯದುರಿ, ಬಾಯಿಕೈಗಳಿಂದ ಕೆಲವು ಬಗೆಯ ಕೆಲಸಗಳು ನಡೆಯುವುವು. ಪ್ರೇಮವು ಉಕ್ಕಿದಾಗ ಇದೇ ಬಾಹ್ಯಾವಯವಗಳು ಇನ್ನೊಂದು ಬಗೆಯಲ್ಲಿ ಕೆಲಸ ಮಾಡುವುವು. ಇದಕ್ಕೆ ಪ್ರತಿಯಾಗಿ. ದೇಹದಲ್ಲಿ ಶಕ್ತಿಗುಂದಿದಾಗ ಮನಸ್ಸು ಚಂಚಲವಾಗುವುದು; ದೇಹದಲ್ಲಿ ರಕ್ತಪುಷ್ಟಿ ಇರುವಾಗ ಮನಸ್ಸಿನಲ್ಲಿ ವೀರಭಾವವು ತಲೆದೋರುವುದು. ಹೀಗೆ ಬಾಹ್ಯಕರಣಗಳಿಗೂ ಅಂತಃಕರಣಗಳಿಗೂ ಪರಸ್ಪರ ಸಂಬಂಧವಿದ್ದರೂ, ಅಂತಃಕರಣ ವೃತ್ತಿಗಳೆಲ್ಲವನ್ನೂ ಬಾಹ್ಯಕರಣಗಳು ಎಲ್ಲ ಸಂದರ್ಭಗಳಲ್ಲಿಯೂ ಸಂಪೂರ್ಣವಾಗಿ ವ್ಯಕ್ತಗೊಳಿಸಬಲ್ಲುವೆಂದು ಹೇಳಲಾಗುವುದಿಲ್ಲ. ಏಕೆಂದರೆ ಬಾಹ್ಯಕರಣಗಳು ಸ್ಥೂಲವಾದುವು, ಅಂತಃಕರಣಗಳು ಸೂಕ್ಷ್ಮವಾದುವು. ಬಾಹ್ಯಕರಣಗಳ ಚೇಷ್ಟಿತಗಳೂ ನಿಶ್ಚೇಷ್ಟಿತಗಳೂ ಅಂತಃಕರಣ ಭಾವಗಳನ್ನು ಸ್ವಲ್ಪಮಟ್ಟಿಗೆ ಸೂಚಿಸಬಹುದು; ವಿಸ್ತಾರವಾಗಿ ವಿವರಿಸಲಾರವು. ಅದರಂತೆಯೇ ಬಾಹ್ಯಸ್ಥಿತಿಗಳನ್ನು ವರ್ಣಿಸಲು ಅನುಕೂಲವಾಗುವ ಮಾತುಗಳು ಅಂತಃಸ್ಥಿತಿಗಳನ್ನು ವರ್ಣಿಸಲು ಅಷ್ಟಾಗಿ ಅನುಕೂಲಿಸದೆ ಇರುವುದು ಸ್ವಾಭಾವಿಕವಾಗಿಯೇ ಇದೆ. ಈ ಕಾರಣದಿಂದ ವಿಜ್ಞಾನಶಾಸ್ತ್ರಗಳಿಗೆ ಉಪಯುಕ್ತವಾಗುವ ಸಂಜ್ಞೆ ಸಂಕೇತಗಳು ಕುಶಲ ಕಲೆಗಳಿಗೆ ಅಷ್ಟು ಮಟ್ಟಿಗೆ ಉಪಯೋಗವಾಗುವುದಿಲ್ಲ. ಭಗವಂತನ ಅನಂತಶಕ್ತಿಗಳಲ್ಲಿ ಒಂದಾದ ಭಾಷೆಯು ವೈಜ್ಞಾನಿಕ ಕಲಾಕುಶಲರಿಬ್ಬರಿಂದಲೂ ವ್ಯವಹೃತವಾಗುತ್ತಿದ್ದರೂ. ಅವರಿಬ್ಬರ ವ್ಯವಹಾರ ರೀತಿಗಳೂ ಬೇರೆ ಬೇರೆ. ವೈಜ್ಞಾನಿಕರ ಮಾತುಗಳು ಮಿತವಾದ ಅರ್ಥವುಳ್ಳವು: ಅವು ಪ್ರತ್ಯಕ್ಷ ಪದಾರ್ಥಗಳನ್ನು ತಿಳಿಸುವುವು; ಅವುಗಳ ರೀತಿ ವಾಚ್ಯರೀತಿ. ಕಲಾ ಕುಶಲರ ಮಾತುಗಳು ಅಪರಿಮಿತವಾದ ಭಾವಗಳುಳ್ಳವು; ಅವು ಪರೋಕ್ಷ ಪದಾರ್ಥಗಳನ್ನು ಸೂಚಿಸುವುವು: ಅವುಗಳ ರೀತಿ ವ್ಯಂಗ್ಯರೀತಿ. ವಿಜ್ಞಾನಶಾಸ್ತ್ರದಲ್ಲಿ "ಅಗ್ನಿ" ಎಂಬ ಹೆಸರಿನಿಂದ ಹೇಳಲ್ಪಡುವ ವಸ್ತುವೇ ಬೇರೆ: ಕಾವ್ಯದಲ್ಲಿ "ಚಿಂತಾಗ್ನಿ" "ಕೋಪಾಗ್ನಿ" ಎಂಬ ಪದಗಳಲ್ಲಿಯ "ಅಗ್ನಿ" ಶಬ್ದದಿಂದ ಬೋಧೆಯಾಗುವ

ವಸ್ತುವೇ ಬೇರೆ. ತಲೆಯ ಮೇಲೆ ಕೈಯಿಟ್ಟು ಕುಳಿತಿರುವವನ ಅಥವಾ ರೋಷಾವಿಷ್ಟನಾಗಿ ಆರ್ಭಟಿಸುತ್ತಿರುವವನ ಹೃದಯದಲ್ಲಿಯ ಅಗ್ನಿಯಿಂದ ಅನ್ನವನ್ನು ಬೇಯಿಸಲಾದೀತೆ?

ಬಹಿರಂಗ ಪ್ರಪಂಚದಲ್ಲಿಯ ವಸ್ತುಗಳನ್ನು ಗುರುತಿಸಲು ಏರ್ಪಟ್ಟಿರುವ ಸಂಕೇತಗಳು ಸಮರ್ಪಕವಾದ ರೀತಿಯಲ್ಲಿ ಅಂತರಂಗ ಪ್ರಪಂಚಕ್ಕೆ ಅನ್ವಯಿಸಲಾರವೆಂದು ಹೇಳಿದೆವಷ್ಟೆ. ಭೌತಿಕ ರಾಸಾಯನಿಕಶಾಸ್ತ್ರಗಳು ನಮ್ಮ ಕೈ ಕಣ್ಣು ಮೊದಲಾದ ಬಾಹ್ಯೇಂದ್ರಿಯಗಳ ಹಿಡಿತಕ್ಕೆ ಸಿಕ್ಕುವ ವಸ್ತುಗಳನ್ನು ಕುರಿತು ವಿಚಾರ ಮಾಡುತ್ತವೆ. ಇಂತಹ ವಸ್ತುಗಳ ಸ್ವರೂಪವನ್ನು ತಿಳುಹಿಸಲು ಅಳೆಯುವುದು, ತೂಕುವುದು, ಎಣಿಸುವುದು ಮೊದಲಾದ ಪ್ರಮಾಣ ಪದ್ಧತಿಗಳು ಗೊತ್ತಾಗಿವೆ. ಇವು ಅಂತರಿಂದ್ರಿಯಗಳ ಕಾರ್ಯಗಳ ಸ್ವರೂಪವನ್ನು ತಿಳುಹಿಸಲು ಸಾಕಾಗಲಾರವು. ಆತ್ಮ ವಸ್ತುವು ಮಾತಿಗೂ ಮನಸ್ಸಿಗೂ ಸಹ ಸಿಕ್ಕತಕ್ಕುದಲ್ಲವೆಂದು ವೇದವು ಹೇಳುತ್ತದೆ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ". ಇಂತಹ ಆತ್ಮವಸ್ತುವಿನ ಒಳಗಿನ ಆವರಣವು ಸೂಕ್ಷ್ಮ ದೇಹ. ಅದರ ಹೊರಗಿನ ಆವರಣವು ಸ್ಥೂಲದೇಹ. ಈ ಹೊರಗಿನ ಆವರಣದಲ್ಲಿ ಮಾತುಗಳಿಗೆ ವ್ಯಾಪನೆಯಿರುವಷ್ಟರಮಟ್ಟಿಗೆ ಒಳಗಿನ ಆವರಣದಲ್ಲಿ ವ್ಯಾಪನೆಯಿರಲಾರದು. ಒಳಕ್ಕೊಳಕ್ಕೆ ಹೋದ ಹಾಗೆಲ್ಲ ಮಾತಿನ ಶಕ್ತಿಯು ಕುಗ್ಗುತ್ತ ಬರುವುದು. ಹೀಗಿರಲಾಗಿ, ಸೂಕ್ಷ್ಮದೇಹದ ವ್ಯಾಪಾರ ವಿಶೇಷಗಳನ್ನು ಸ್ಥೂಲದೇಹದ ವ್ಯಾಪಾರ ವಿಶೇಷ ಗಳಿಗಾಗಿ ಕಲ್ಪಿತವಾಗಿರುವ ಭಾಷಾಸಂಕೇತಗಳಿಂದ ವಿವರಿಸತೊಡಗುವುದು ಒನಕೆಯಿಂದ ಚಿತ್ರಪಟವನ್ನು ಬರೆಯ ತೊಡಗಿದಂತೆಯೇ ಸರಿ.* ಮನುಷ್ಯನ ಮನೋವ್ಯಾಪಾರಗಳು ಅಳತೆಗೂ ತೂಕಕ್ಕೂ ಸಿಕ್ಕತಕ್ಕುವಲ್ಲ. ಅದರಲ್ಲಿಯೂ ಕವಿಯ ಅಂತರಂಗವು ಅತ್ಯಂತ ಸೂಕ್ಷ್ಮವಾದುದು. ಅದರ ರಹಸ್ಯಗಳನ್ನು ಬಾಹ್ಯವಸ್ತುಗಳಿಗೆ ಉಪಯುಕ್ತವಾಗುವ ವಿಮರ್ಶಾಕ್ರಮಗಳಿಗೆ ಗುರಿಪಡಿಸಿ, ವೈಜ್ಞಾನಿಕ ರೀತಿಯಲ್ಲಿ ಅವುಗಳನ್ನು ವಿವರಿಸಿ, ಗಣಿತಶಾಸ್ತ್ರದ ನಿಯಮಗಳಂತಹ ನಿಯಮಗಳನ್ನು ಅವುಗಳಿಗೆ ಗೊತ್ತುಮಾಡುವುದು ಯಾರಿಗೂ ಸಾಧ್ಯವಾಗದು. ಈ ಸಂದರ್ಭಕ್ಕೆ ಯುಕ್ತವಾದ ವೇದವಚನವೊಂದಿರುವುದು. ಅದನ್ನಿಲ್ಲಿ ಸ್ಮರಿಸಬಹುದು.

ಯಾಂ ಋಷಯೋ ಮನ್ತ್ರಕೃತೋ ಮನೀಷಿಣಃ ।
ಅನ್ವೈಚ್ಛನ್ ದೇವಾಸ್ತಪಸಾ ಶ್ರಮೇಣ ॥
ತಾಂ ದೇವೀಂ ವಾಚಗ್ಂ ಹವಿಷಾ ಯಜಾಮಹೇ ।
ಸಾ ನೋ ದಧಾತು ಸುಕೃತಸ್ಯ ಲೋಕೇ ॥
ಚತ್ವಾರಿ ವಾಕ್ಪರಿಮಿತಾ ಪದಾನಿ ।
ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ॥



* ಟೆನ್ನಿಸನ್ ಕವಿಯು ಒಂದು ಪ್ರಸಿದ್ಧ ಕಾವ್ಯದಲ್ಲಿ ಹೀಗೆ ಹೇಳಿರುವನು:

*I sometimes hold it half a sin*
*To put in words the grief I feel;*
*For words, like Nature, half reveal*
*And half conceal the soul within.*

ಗುಹಾ ತ್ರೀಣಿ ನಿಹಿತಾ ನೇಂಗಯನ್ತಿ।
ತುರೀಯಂ ವಾಚೋ ಮನುಷ್ಯಾ ವದನ್ತಿ ॥

[ಮನ್ತ್ರಗಳ ಪ್ರವರ್ತಕರೂ ಬುದ್ಧಿವಂತರೂ ಆದ ಋಷಿಗಳೂ ದೇವತೆಗಳೂ ಸಹ ಬಹು ಪ್ರಯಾಸಪಟ್ಟು ತಪಸ್ಸಿನಿಂದ ಯಾವಾಕೆಯನ್ನು ಹುಡುಕಿದರೋ ಆ ವಾಗ್ದೇವಿಯನ್ನು ನಾವು ಈ ಹವಿಸ್ಸಿನಿಂದ ಆರಾಧಿಸುತ್ತೇವೆ. ಆ ದೇವಿಯು ನಮ್ಮನ್ನು ಪುಣ್ಯಲೋಕಗಳಲ್ಲಿ ಸ್ಥಾಪಿಸಲಿ. ಆ ವಾಗ್ದೇವತೆಯು ಗೊತ್ತಾದ ನಾಲ್ಕು ಅವಯವಗಳನ್ನು ಪಡೆದು (ಎಂದರೆ, ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ನಾಲ್ಕು ರೂಪಗಳಲ್ಲಿ) ಇರುವಳು. ಆ ರೂಪಗಳನ್ನು ಪಂಡಿತರಾದ ಬ್ರಾಹ್ಮಣರು ತಿಳಿಯುವರು. ಅವುಗಳಲ್ಲಿ ಮೂರು ಹೃದಯಗುಹೆಯಲ್ಲಿದ್ದುಕೊಂಡು ಬಹಿರಂಗಕ್ಕೆ ಬರುವುದಿಲ್ಲ. ನಾಲ್ಕನೆಯದನ್ನು ಮಾತ್ರ (ವೈಖರೀ) ಮನುಷ್ಯರು ಆಡುತ್ತಾರೆ.]

ಮೂಲಾಧಾರಾತ್ ಪ್ರಥಮಮುದಿತೋಯಸ್ತು ತಾರಃ ಪರಾಖ್ಯಃ।
ಪಶ್ಚಾತ್ ಪಶ್ಯನ್ತ್ಯಥ ಹೃದಯಗೋ ಬುದ್ಧಿಯುಙ್ಮಧ್ಯಮಾಖ್ಯಃ ॥
ವಕ್ತ್ರೇ ವೈಖರ್ಯಥ ರುರುದಿಷೋರಸ್ಯ ಜನ್ತೋಸ್ಸುಷುಮ್ನಾ।
ಬದ್ಧಸ್ತಸ್ಮಾದ್ಭವತಿ ಪವನಪ್ರೇರಿತೋ ವರ್ಣಬಂಧಃ ॥

[ನಾಭಿ ಪ್ರದೇಶದಲ್ಲಿ ಹುಟ್ಟುವ ನಾದವೇ "ಪರಾ;" ಅದು ಹೃದಯಪ್ರದೇಶವನ್ನು ಸೇರಿದಾಗ "ಪಶ್ಯನ್ತಿ" ಎನಿಸಿಕೊಳ್ಳುವುದು; ಅದು ಬುದ್ಧಿಯೊಡನೆ ಕೂಡಿದಮೇಲೆ "ಮಧ್ಯಮ"ವಾಗುವುದು. ಅಳುವುದು ಮೊದಲಾದ ಕ್ರಿಯೆಗಳಲ್ಲಿ ಆ ನಾದವು ವಾಯುವಿನಿಂದ ಪ್ರೇರಿತವಾಗಿ ಸುಷುಮ್ನಾನಾಡಿಯ ಓಡಿತಕ್ಕೊಳಪಟ್ಟು ಮುಖದಿಂದ ಹೊರಕ್ಕೆ ಬಂದಾಗ ಅದು "ವೈಖರಿ" ಯೆಂದೆನ್ನಿಸಿಕೊಳ್ಳುವುದು.]

ಎಂದರೆ ವೈಖರಿಯು ಸಾಮಾನ್ಯವಾಗಿ ವ್ಯವಹಾರದಲ್ಲಿರುವ ಸ್ಥೂಲಭಾಷೆ; ಮಧ್ಯಮವು ಅದಕ್ಕಿಂತ ಸೂಕ್ಷ್ಮತರವಾದುದು; ಪಶ್ಯಂತಿಯು ಇನ್ನೂ ಸೂಕ್ಷ್ಮತರವಾದುದು; ಪರಾ ಎಂಬುದು ಎಲ್ಲಕ್ಕಿಂತಲೂ ಸೂಕ್ಷ್ಮತರವಾದುದು. ಇದೇ ಅರ್ಥವನ್ನೇ ಈ ಕೆಳಗಿನ ಶ್ಲೋಕವು ಸಮರ್ಥಿಸುತ್ತದೆ.

ಪರಾ ವೃಕ್ಷೇಷು ಸಂಜಾತಾ। ಪಶ್ಯಂತೀ ಭುಜಗೇಷು ಚ ॥
ಮಧ್ಯಮಾ ವೈ ಪಶೋಶ್ಚೈವ ವೈಖರೀ ಮಾನವೇಷು ಚ ॥

["ಪರಾ" ಎಂಬ ವಾಗ್ವಿಶೇಷವು ಮರಗಳಲ್ಲಿ ಹುಟ್ಟುವುದು; "ಪಶ್ಯಂತೀ" ಎಂಬುದು ಹಾವುಗಳಲ್ಲಿ; "ಮಧ್ಯಮಾ" ಎಂಬುದು ಪಶುಗಳಲ್ಲಿ; "ವೈಖರೀ" ಎಂಬುದು ಮನುಷ್ಯರಲ್ಲಿ.]

ಇದಕ್ಕನುಸಾರವಾಗಿ ಈ ವಾಕ್ಯವು ಇರುವುದು:

ವೈಖರೀಶಕ್ತಿ ನಿಷ್ಪತ್ತಿರ್ಮಧ್ಯಮಾ ಶ್ರುತಿಗೋಚರಾ।
ದ್ಯೋತಿತಾರ್ಥಾ ತು ಪಶ್ಯನ್ತೀ ಸೂಕ್ಷ್ಮಾವಾಗನಪಾಯಿನೀ ॥

[ವೈಖರಿಯು ಸಂಪೂರ್ಣವಾದ (ಬಾಹ್ಯ) ಶಕ್ತಿಯುಳ್ಳುದು; ಮಧ್ಯಮವು ಆಲಿಸಿದವರಿಗೆ ಕೇಳಬರತಕ್ಕುದು; ಅರ್ಥದ ಛಾಯೆಯನ್ನು ಮಾತ್ರ ತೋರತಕ್ಕುದು ಪಶ್ಯನ್ತಿ; ಪರಾ ಎಂಬುದು ಅತ್ಯಂತ ಸೂಕ್ಷ್ಮವೂ ಶುದ್ಧವೂ ಆದುದು.]

ಇದರಿಂದ ಸಂಗೀತ ಅಥವಾ ಗಾನವು ಮಧ್ಯಮಾ ಮೊದಲಾದ ಅಂತರಂಗದೊಳಗಿನ ಜಾತಿಗಳ ಭಾಷೆಯ ಒಂದು ರೂಪವೆಂದೂ, ಕವಿಯು ಸಹ ವಿಷಯಾನುಗುಣವಾಗಿ

ವೈಖರಿಯಿಂದ ಮಧ್ಯಮಕ್ಕೂ, ಮಧ್ಯಮದಿಂದ ಪಶ್ಯಂತಿಗೂ, ಸಾಧ್ಯವಿದ್ದರೆ ಪಶ್ಯಂತಿಯಿಂದ "ಪರಾ" ರೀತಿ ತಿರುಗಬೇಕಾದವನೆಂದೂ ಬೋಧಿತವಾಗುತ್ತದೆ. ಈ ಭಾಷೆಗಳ ಸ್ವರೂಪಲಕ್ಷಣಗಳ ವಿವರವು ಯೋಗಶಾಸ್ತ್ರಜ್ಞರಿಗೆ ಚೆನ್ನಾಗಿ ತಿಳಿದಿರಬಹುದು. ನಾವು ಇಲ್ಲಿ ಇಷ್ಟು ಮಾತ್ರ ಹೇಳಬಹುದು – ಪರಾ ಎಂಬುದು ದೇವಭಾಷೆ, ವೈಖರಿಯು ನಮ್ಮ ವಾಡಿಕೆಯ ಭಾಷೆ. "ಪರಾ" ಎಂಬುದು ಆತ್ಮನ ಅಂತರಾವರಣದೊಳಗಿನದು; ವೈಖರಿಯು ಆತ್ಮನ ಬಹಿರಾವರಣದ ಹೊರಗಿನದು. "ಪರಾ" ಎಂಬುದು ಅತ್ಯಂತ ರಹಸ್ಯವಾದುದು; ವೈಖರಿಯು ಅತ್ಯಂತ ಪ್ರಸಿದ್ಧವಾದುದು – ಸ್ಪಷ್ಟವಾಗಿ ಕಾಣುವ ಬಾಹ್ಯ ವಸ್ತುಗಳಿಗೆ ವೈಖರಿಯು ಸರಿಹೋಗತಕ್ಕುದು. ಕವಿಯ ಪ್ರಸಂಗಕ್ಕೆ ಬರುವ ಆಂತರಿಕ ಮರ್ಮಗಳಿಗೆ ಅವನು ವೈಖರಿಯನ್ನು ಬಿಟ್ಟು "ಪರಾ" ವಾಕ್ಕಿನ ದಾರಿಯನ್ನು ಹಿಡಿಯಬೇಕು.

**ಕಾವ್ಯಮೀಮಾಂಸೆ**

ಹಾಗಾದರೆ ಕಾವ್ಯರಸವನ್ನು ಕುರಿತು ವಿಚಾರಮಾಡುವುದೆಲ್ಲವೂ ನಿರರ್ಥಕವೇ ತಾನೆ?– ಎಂದು ಕೇಳಲಾಗುವುದು. ಪರಮಾತ್ಮ ವಸ್ತುವು ವರ್ಣನಾತೀತವಾದುದೆಂದು ವೇದವು ಸಾರಿದ್ದರೂ ವೇದಾಂತವು ಆ ವಸ್ತುವನ್ನು ಕುರಿತು ಜಿಜ್ಞಾಸೆ ಮಾಡತಕ್ಕುದೇ ಅಲ್ಲವೇ? ಅದೇ ರೀತಿಯಲ್ಲಿಯೇ ಕವಿರಹಸ್ಯಜಿಜ್ಞಾಸೆಯೂ ನಡೆಯಬೇಕು. ಅದರ ಪರಿಣಾಮವು ಗಣಿತಾದಿ ಶಾಸ್ತ್ರಗಳ ರೀತಿಯಲ್ಲಿ – "ಇದಮಿತ್ಥಂ" ಎಂಬಂತೆ ಹೊರಪಡಲಾರದೆಂದು ಎಚ್ಚರ ಕೊಡುವುದು ನಮ್ಮ ಅಭಿಪ್ರಾಯವೇ ಹೊರತು ಆ ಜಿಜ್ಞಾಸೆಯು ನಿರರ್ಥಕವಾದುದೆಂಬುದಲ್ಲ. ಕವಿತಾರಹಸ್ಯವನ್ನು ಕುರಿತು ಲಾಕ್ಷಣಿಕರು ಹೇಳುವುದೆಲ್ಲವೂ ಅರುಂಧತೀ ಪ್ರದರ್ಶನ ನ್ಯಾಯದಿಂದ ಲಕ್ಷ್ಯವಿಷಯದ ಸಾಮೀಪ್ಯವನ್ನು ಉಂಟುಮಾಡಿಕೊಡತಕ್ಕುವು. ನಮ್ಮೂರಿಗೆ ಪರಸ್ಥಳದಿಂದ ಬಂದು ತನ್ನ ಬಂಧುವಿನ ಮನೆಯನ್ನು ಹುಡುಕುತ್ತಿರುವ ಮನುಷ್ಯನಿಗೆ ನಾವು ಅವನು ಹೋಗಬೇಕಾದ ದಾರಿಯನ್ನೂ ಅವನ ಬಂಧುವಿರುವ ಬೀದಿಯನ್ನೂ ಆತನ ಮನೆಯ ಸುತ್ತಮುತ್ತಲಿರುವ ಕೆಲವು ಹೆಗ್ಗುರುತುಗಳನ್ನೂ ಹೇಳುವೆವೇ ಹೊರತು ಮನೆಯ ಸ್ವರೂಪವೆಲ್ಲವನ್ನೂ ಬಣ್ಣಿಸುವುದಿಲ್ಲ. ಕಾವ್ಯಮೀಮಾಂಸಕರು ಮಾಡುವ ಸಹಾಯವು ಅಂತಹುದು. ಅವರು ವಿಶದಗೊಳಿಸಲಾಗದ ಅಂಶಗಳಷ್ಟೋ ಇರುವುವು ಈ ಸಂಗತಿಯನ್ನು ನಮ್ಮ ಮುಂದಿನ ಉಪನ್ಯಾಸಕ್ಕೆ ಪೀಠಿಕೆಯಾಗಿ ಹೇಳುವುದು ಅವಶ್ಯಕವಾಗಿದೆ. ಮುಖ್ಯವಾಗಿ ಛಂದೋಲಂಕಾರಾದಿ ಶಾಸ್ತ್ರಗಳೆಲ್ಲವೂ ಕಾವ್ಯಜನ್ಯಗಳಾದುವೇ ಹೊರತು ಕಾವ್ಯಜನಕಗಳಲ್ಲ. ಮಹಾಕವಿ ಪ್ರಯೋಗಗಳನ್ನು ಪರಿಶೀಲಿಸಿ ಅವುಗಳಿಂದ ಸತ್ಕಾವ್ಯ ಲಕ್ಷಣಗಳಿಂತಹವೆಂಬುದನ್ನು ನಿರ್ಧರಿಸತಕ್ಕವರೇ ಲಾಕ್ಷಣಿಕರು. ಅವರ ಕಾರ್ಯಕ್ರಮವನ್ನು ಪಾಶ್ಚಾತ್ಯರ ತಾರ್ಕಿಕ ರೀತಿಯಲ್ಲಿ Inductive "ಆನುಮಾನಿಕ" ವೆಂದು ಕರೆಯಬಹುದು. ಇಂತಹವರ ಸಿದ್ಧಾಂತಗಳನ್ನಿಟ್ಟುಕೊಂಡ Deductive "ಪ್ರಾಯೋಗಿಕ" ಅಥವಾ "ನಿಗಮನ" ರೀತಿಯಿಂದ ಕಾವ್ಯಗಳನ್ನು ಕಟ್ಟಲು ಹೊರಡುವವರು ಶರೀರಶಾಸ್ತ್ರವನ್ನೋದಿ ಅನೇಕ ಮಂದಿಯ ಅಂಗಾಂಗಗಳನ್ನು ತೆಗೆದುಕೊಂಡು ಅವುಗಳಿಂದ ಹೊಸ ಮನುಷ್ಯನೊಬ್ಬನನ್ನು ಸೃಷ್ಟಿಮಾಡಲು ಹೊರಡುವ ಬುದ್ಧಿಶಾಲಿಗೆ ಸಮಾನರಾದವರು.

ಕಾವ್ಯದ ಜೀವಧಾರವು ಕವಿಯ ಪ್ರತಿಭೆ – "ಪ್ರತಿಭಾಸ್ಯ ಬೀಜಂ" ಈ ಪ್ರತಿಭೆಯನ್ನು ಆತನ ಅಂತರಂಗದಲ್ಲಿರುವ ಗ್ರಾಹಕಶಕ್ತಿ, ಕಲ್ಪನಾಶಕ್ತಿ ಮತ್ತು ದ್ಯೋತಕಶಕ್ತಿ (ಉದ್ಭಾಸಕಶಕ್ತಿ)

ಗಳೆಂದು ವಿವರಿಸಬಹುದು. ಕನ್ನಡಿಯನ್ನು ಸೂರ್ಯರಶ್ಮಿಗೆ ಅಭಿಮುಖವಾಗಿ ಹಿಡಿದರೆ ಅದು ಸೂರ್ಯಪ್ರಭೆಯನ್ನು ಗ್ರಹಿಸಿ ಅದನ್ನು ಮತ್ತೊಂದು ಕಡೆಗೆ ಎಸೆಯುತ್ತದೆ. ಆ ಕನ್ನಡಿಯು ಎಷ್ಟು ಸ್ವಚ್ಛವಾಗಿರುವುದೋ ಅದರಿಂದ ಪ್ರತಿಫಲಿಸುವ ಪ್ರಭೆಯು ಅಷ್ಟು ಹೆಚ್ಚಾಗಿರುವುದು. ಮತ್ತು ಕನ್ನಡಿಯ ಎದುರಿಗಿರುವ ಗೋಡೆಯ ಬಿಳುಪು ಎಷ್ಟು ನಿರ್ಮಲವಾಗಿರುವುದೋ ಅದರ ಮೇಲೆ ಬೀಳುವ ಪ್ರಭೆಯೂ ಅಷ್ಟು ಪ್ರಕಾಶಮಾನವಾಗಿರುವುದು. ಕವಿಯ ಮನಸ್ಸು ಕನ್ನಡಿ. ಅದು ಇತರ ಜನರ ಮನಸ್ಸುಗಳಿಗಿಂತ ನಿರ್ಮಲತರವಾಗಿರುವುದು. ಆದುದರಿಂದ ಇತರರು ಗ್ರಹಿಸಲಾಗದ ಸೃಷ್ಟಿರಹಸ್ಯಗಳೆಲ್ಲವನ್ನು ಅದು ಗ್ರಹಿಸಬಲ್ಲುದು. ಅವನ ಅಂತರಿಂದ್ರಿಯಗಳು ಇತರರ ಅಂತರಿಂದ್ರಿಯಗಳಿಗಿಂತ ಸೂಕ್ಷ್ಮಗಳಾಗಿಯೂ ಶುದ್ಧಗಳಾಗಿಯೂ ಇರುವುವು. ಆದುದರಿಂದ ಇತರರಿಗೆ ಕಂಡುಬರದ ಸೌಂದರ್ಯ ತೇಜೋವಿಶೇಷಗಳು ಅವನ ಕಣ್ಣಿಗೆ ಕಾಣಿಸುವುವು; ಇತರರಿಗೆ ಕೇಳಬರದ ಧ್ವನಿವಿಶೇಷಗಳು ಅವನ ಕಿವಿಗೆ ಕೇಳಿಸುವುವು. ಬೆಟ್ಟ, ಕಾಡು, ನದಿ, ಸಮುದ್ರ, ಮೋಡ, ನಕ್ಷತ್ರ–ಇವೇ ಮೊದಲಾದ ಮೂಕವಸ್ತುಗಳು ಅವನೊಡನೆ ಮಾತನಾಡುವುವು. ಮಕ್ಕಳ ನಗು, ದೊಡ್ಡವರ ಅಳು, ಬಡವರ ಭಕ್ತಿ, ಭಾಗ್ಯವಂತರ ಧೈರ್ಯ ಇವೇ ಮೊದಲಾದ ನಮ್ಮ ಸಾಮಾನ್ಯ ಚರ್ಯೆಗಳಿಂದ ಕೆಲವು ವಿಶೇಷ ಭಾವಗಳು ಅವನಿಗೆ ಬೋಧೆಯಾಗುವುವು. ಹೀಗೆ ಪ್ರಕೃತಿಯ ವೈಚಿತ್ರ್ಯಗಳಿಂದಲೂ ಮಾನವರ ಚೇಷ್ಟೆಗಳಿಂದಲೂ ಅವನು ಗ್ರಹಿಸಿದ ಅಂಶಗಳು ಕಾವ್ಯರೂಪದಲ್ಲಿ ಪ್ರತಿಫಲಿಸುತ್ತವೆ. ಆದರೆ ಹಾಗೆ ಅವು ಪ್ರತಿಫಲಿಸುವುದಕ್ಕೆ ಮುಂಚೆ ಸೂರ್ಯಪ್ರಭೆಯನ್ನು ಪ್ರತಿಫಲಗೊಳಿಸುವ ಕನ್ನಡಿಯಲ್ಲಾಗದ ಒಂದು ಬಗೆಯ ವ್ಯಾಪಾರವು–ಒಂದು ಅದ್ಭುತವಾದ ರಸಕ್ರಿಯೆಯು–ಕವಿಯ ಮನಸ್ಸಿನಲ್ಲಿ ನಡೆಯುತ್ತದೆ. ಅದೇನೆಂದರೆ ಗ್ರಹಿಸಿದ ಅಂಶಗಳ ಪುನಸ್ಸಂಯೋಜನೆ. ನಾವು ತಿಂದ ಆಹಾರ ವಸ್ತುಗಳು ನಮ್ಮ ದೇಹದಲ್ಲಿ ರಕ್ತಮಾಂಸಾದಿರೂಪಾಂತರಗಳನ್ನು ಪಡೆಯುವಂತೆ ಕವಿಯು ಜಗತ್ತಿನಿಂದ ಸಂಪಾದಿಸಿದ ಜ್ಞಾನಾನುಭವಗಳು ಆತನ ಅಂತರಂಗದಲ್ಲಿ ರೂಪಾಂತರಗಳನ್ನು ಹೊಂದುವುವು. ಅಕ್ಕಸಾಲಿಗನು ಚಿನ್ನದ ಕೈಕಡಗವನ್ನು ಕರಗಿಸಿ ಅದರಿಂದಲೇ ಕಿವಿಗೆ ಕಡಕುಗಳನ್ನೋ ಬೆರಳಿಗೆ ಉಂಗುರಗಳನ್ನೋ ಮಾಡಿ ಅವುಗಳಲ್ಲಿ ತನ್ನಲ್ಲಿರುವ ಮುತ್ತುರತ್ನಗಳನ್ನೂ ಸೇರಿಸಿ ಹಿಂದಕ್ಕೆ ಕೊಡುವಂತೆ, ಕವಿಯು ಒಂದು ರೂಪದಲ್ಲಿ ತನಗೆ ದೊರೆತ ಲೋಕಾನುಭವವನ್ನು ಮತ್ತೊಂದು ರೂಪದಲ್ಲಿ ಲೋಕಕ್ಕೆ ಹಿಂದಕ್ಕೆ ಕೊಡುವನು. ಕವಿಯ ಮನಸ್ಸು ಕನ್ನಡಿಯಾದರೂ ಅದೇನು ಸಾಮಾನ್ಯವಾದ ಕನ್ನಡಿಯಲ್ಲ: ಅದೊಂದು ಬಗೆಯ ಭೂತಕನ್ನಡಿ. ಅದರಲ್ಲಿ ಕಲ್ಪನಾಶಕ್ತಿಯೆಂಬ ಭೂತವೊಂದಿರುವುದು. ಈ ಭೂತಕನ್ನಡಿಯು ಮೊದಲು ಫೋಟೋ ಯಂತ್ರದ ಕನ್ನಡಿಯಂತೆ ಕಾಂತಿಯನ್ನು ಸಂಗ್ರಹಿಸಿ ಆಮೇಲೆ ಬಗೆಬಗೆಯ ಬಣ್ಣಗಳುಳ್ಳ ಆ ಕಿರಣಗಳನ್ನು ಕರಗಿಸಿ. ಸಂಯೋಗಮಾಡಿ. ಪುನಃ ಬೇರೆ ಬೇರೆ ಕಾಂತಿಗಳನ್ನು ಅವುಗಳಿಂದ ಹುಟ್ಟಿಸಿ. ಹೊರಕ್ಕೆ ಹಾಕಬಲ್ಲುದು. ಹಾಗೆ ಪ್ರತಿಫಲಿತವಾದ ಕಾಂತಿಪುಂಜವು ಬೀಳುವ ಗೋಡೆಯೇ ವಾಚಕರ ಮನಸ್ಸು: ಅದನ್ನು ನೋಡುವ ಕಣ್ಣೇ ಅವರ ಬುದ್ಧಿ. ಅವರ ಮನೋಬುದ್ಧಿಗಳು ಎಷ್ಟೆಷ್ಟು ಸ್ವಚ್ಛವಾಗಿರುವುವೋ ಅವರಿಗೆ ಕಾವ್ಯದಿಂದ ದೊರೆಯುವ ಬೆಳಕು ಅಷ್ಟಷ್ಟು ಚೆನ್ನಾಗಿರುವುದು. ಬಹುಶಃ ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಮಹನೀಯರಾದ ಸಾಯಣಾಚಾರ್ಯರು ಒಂದು ಕಡೆಯಲ್ಲಿ ಸರಸ್ವತಿಯನ್ನು ಕುರಿತು

ಚಿದಾನಂದಕಲಾಂ ವಾಣೀಂ ವಂದೇ ಚಂದ್ರಕಲಾಧರಾಂ ।
ನೈರ್ಮಲ್ಯ ತಾರತಮ್ಯೇನ ಬಿಂಬಿತಾಂ ಚಿತ್ತಭಿತ್ತಿಷು ॥

ಎಂದು ಸ್ತೋತ್ರ ಮಾಡಿರುವರು.

## ಕವಿಯ ಪ್ರತಿಭೆ

ಕವಿತೆಯ ಶೈಲಿ, ಧಾಟಿ, ಅಲಂಕಾರ, ಇವೆಲ್ಲವೂ ಕವಿಯ ಪರಿಶ್ರಮದ ಮತ್ತು ಚಮತ್ಕಾರದ ಕಾರ್ಯಗಳು. ಕಾವ್ಯವನ್ನು ನಾಟಕರೂಪದಲ್ಲಿ ಬರೆಯಬೇಕೆ, ಚಂಪೂರೂಪದಲ್ಲಿ ಬರೆಯಬೇಕೆ, ಕೇವಲ ಶ್ಲೋಕರೂಪದಲ್ಲಿ ಬರೆಯಬೇಕೆ; ಅದರಲ್ಲಿ ಎಲ್ಲೆಲ್ಲಿ ಗದ್ಯವಿರಬೇಕು, ಎಲ್ಲೆಲ್ಲಿ ಪದ್ಯವಿರಬೇಕು; ಎಲ್ಲಿ ಮೃದು ಪದಗಳನ್ನುಪಯೋಗಿಸಬೇಕು, ಎಲ್ಲಿ ಪ್ರೌಢಬಂಧವಿರಬೇಕು; ಎಲ್ಲಿ ವರ್ಣನೆಯನ್ನು ವಿಸ್ತರಿಸಬೇಕು, ಎಲ್ಲಿ ಸಂವಾದವನ್ನು ಬೆಳೆಸಬೇಕು; ಎಂತಹ ಉಪಮಾನಗಳನ್ನು ಕೊಡಬೇಕು, ಎಂತಹ ಭಾವಗಳನ್ನು ಹೊರಪಡಿಸಬೇಕು; ಯಾವ ವಿಷಯವನ್ನು ವಿವರಿಸಬೇಕು, ಯಾವುದನ್ನು ಸೂಕ್ಷ್ಮವಾಗಿ ತೋರಬೇಕು; ಎಷ್ಟು ಮಾತಾದರೆ ಒಂದು ಸಂದರ್ಭಕ್ಕೆ ಸರಿ; ಎಷ್ಟಾದರೆ ಹೆಚ್ಚು-ಇವೇ ಮೊದಲಾದ ನೂರಾರು ಪ್ರಶ್ನೆಗಳನ್ನು ತನಗೆ ತಾನೇ ಹಾಕಿಕೊಂಡು ಅವಕ್ಕೆ ತೃಪ್ತಿಕರವಾದ ಉತ್ತರಗಳನ್ನು ನಿರ್ಧರಿಸಿಕೊಳ್ಳುವುದು ಕವಿಯ ಪ್ರತಿಭಾವಿಶೇಷದ ಕೆಲಸ. ಅವನು ಮಾಡಿದ ನಿರ್ಧಾರಣೆಗಳನ್ನು ತೃಪ್ತಿಕರವಾಗಿವೆಯೇ ಇಲ್ಲವೇ ಎಂಬುದಕ್ಕೆ ಅವನ ಕಾವ್ಯದ ಪಠನೆಯಿಂದ ಸಹೃದಯರಾದ ವಾಚಕರಲ್ಲಿ ಉದ್ದಿಷ್ಟರಸಾವಿರ್ಭಾವವಾಗುವುದೇ ಇಲ್ಲವೇ ಎಂಬುದೇ ಪ್ರಮಾಣ.

ರಸವತ್ಕಾವ್ಯವನ್ನು ಬರೆಯಬೇಕೆನ್ನುವವನು ಪೂರ್ವಕವಿಗಳ ಮಾರ್ಗಗಳನ್ನೂ ಮರ್ಮಗಳನ್ನೂ ಅರಿತಿರಬೇಕೆಂದು ಹಿಂದೆಯೇ ಹೇಳಿದುದಾಗಿದೆ. ಈ ಪೂರ್ವಕಾವ್ಯ ಪಠನೆಗೆ ವ್ಯಾಕರಣಶಾಸ್ತ್ರಜ್ಞಾನವೂ ಲಕ್ಷಣಶಾಸ್ತ್ರಜ್ಞಾನವೂ ಬೇಕಾದ ಅಂಗಗಳೆಂಬುದನ್ನು ಹೇಳಬೇಕಾದುದೇ ಇಲ್ಲ. ಶಬ್ದಗಳ ಸಾಧುತ್ವಾಸಾಧುತ್ವಗಳೂ ಉಪಮಾನಗಳ ಔಚಿತ್ಯಾನೌಚಿತ್ಯಗಳೂ ಅವನಿಗೆ ಪ್ರಯತ್ನವಿಲ್ಲದೆಯೇ ತೋರಿಬರುತ್ತಿರುವಂತೆ ಆಗಬೇಕು. ನಾವು ಊಟಮಾಡುವಾಗ ಹೇಗೆ ಕಲಸಬೇಕು, ಹೇಗೆ ಅಗಿಯಬೇಕು, ಹೇಗೆ ನುಂಗಬೇಕು ಎಂದು ಪ್ರತಿಯೊಂದು ಸಲವೂ ಯೋಚನೆಮಾಡುತ್ತಿರುವುದಿಲ್ಲ; ಭೋಜನ ವಿಧಾನದ ನಾನಾ ಕ್ರಿಯೆಗಳು ನಮ್ಮ ಪ್ರಯತ್ನವನ್ನಪೇಕ್ಷಿಸದೆ ತಾವಾಗಿಯೇ ತಡವಿಲ್ಲದೆ ನಡೆಯುತ್ತದೆ. ಆ ಕ್ರಿಯೆಗಳನ್ನು ಸರಿಯಾಗಿ ಮಾಡಿಸುವ ಪ್ರವೃತ್ತಿಗಳು ಅಭ್ಯಾಸದಿಂದ ನಮ್ಮ ಸ್ವಭಾವದ ಒಂದು ಭಾಗವಾಗಿ ಅದರಲ್ಲಿ ಸೇರಿಸಿಕೊಂಡಿರುತ್ತವೆ. ಅದೇ ರೀತಿಯಲ್ಲಿ, ಶಬ್ದ ಸೌಷ್ಠವ ಅಲಂಕಾರಸೌಷ್ಠವಗಳ ವಿವೇಚನೆಯೊಂದು ಮಾತ್ರವಲ್ಲದೆ, ಲೋಕ ರೀತಿಯ ಜ್ಞಾನವೂ ನೀತಿಸೂಕ್ಷ್ಮಜ್ಞಾನವೂ ಸಹ ಕವಿಯ ಅಂತರಂಗದ ಒಂದು ಭಾಗವಾಗಿ ಅದರಲ್ಲಿ ಸೇರಿಸಿಕೊಂಡಿದ್ದು ಅವನಿಂದ ವಿಶೇಷ ಪ್ರಯಾಸವನ್ನಪೇಕ್ಷಿಸದೆಯೇ ಅವನ ಬರೆವಣಿಗೆಯಲ್ಲಿ ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ನಡೆಸಲು ಅನುವಾಗುವುವು.

## ಅಲಂಕಾರ-ಶೈಲಿ

ಅವನ ಪ್ರಯತ್ನವಿಲ್ಲದೇ ಆಗಲಿ, ಪ್ರಯತ್ನದಿಂದಲೇ ಆಗಲಿ, ಯಾವ ಯಾವ ಚಮತ್ಕಾರಗಳು

ಕಾವ್ಯದಲ್ಲಿ ತೋರಿಬಂದರೂ ಅವೆಲ್ಲವೂ ರಸಪರಿಪುಷ್ಟಿ ಮಾಡತಕ್ಕವುಗಳಾಗಿರಬೇಕೇ ಹೊರತು ರಸಕ್ಕೆ ಭಂಗ ತರತಕ್ಕುವುಗಾಳಾಗಿರಬಾರದು. ಮದುವೆಯ ಮನೆಗೆ ವಧೂವರರನ್ನಾಶೀರ್ವದಿಸುವುದಕ್ಕೆಂದು ಇಷ್ಟಮಿತ್ರರನ್ನು ಕರೆದು, ಬಂದವರಿಗೆ ವಿವಾಹಮಂಟಪದ ಸೊಬಗನ್ನೂ ವಾದ್ಯವಿಶೇಷಗಳ ಗದ್ದಲವನ್ನೂ ಕಿಕ್ಕಿರಿಯುವ ಜನಸಂದಣಿಯನ್ನೂ ಜೀಗರ ಓಡಾಟವನ್ನೂ ತೋರಿಸಿ, ಫಲಪುಷ್ಪ ತಾಂಬೂಲಗಳನ್ನು ಕೊಟ್ಟು ವಧೂವರರನ್ನು ಮಾತ್ರ ತೋರಿಸದೆ ಕಳುಹಿಸುವುದುಂಟು, ಅವರನ್ನಾಶೀರ್ವದಿಸಬೇಕೆಂಬುದು ಕರೆದವರಿಗೂ ನೆನಪಿರುವುದಿಲ್ಲ, ಹೋದವರಿಗಂತೂ ಇರುವುದೇ ಇಲ್ಲ. ಆ ರೀತಿಯಲ್ಲಿ ಕವಿಯು ಹಾಕುವ ಅನುಪ್ರಾಸ, ಶ್ಲೇಷೆ ಉತ್ಪ್ರೇಕ್ಷೆಗಳನ್ನು ಸಂಭ್ರಮದಿಂದ ವಾಚಕನು ಬೆರಗಾಗಿ ಕಾವ್ಯದ ಮುಖ್ಯ ರಸವನ್ನು ಮರೆಯವಂತಾಗಬಾರದು. ಕವಿತ್ವದಲ್ಲಿ ಯಾವ ಅಲಂಕಾರಪಿಲ್ಲದಿದ್ದರೂ ವಾಚಕನಲ್ಲಿ ರಸೋದ್ರೇಕವಾಗುವುದಾದರೆ ಅದು ಸತ್ಕಾವ್ಯವೇ; ರಸೋದ್ರೇಕವನ್ನುಂಟುಮಾಡಲಾರದ ಕವಿತ್ವದಲ್ಲಿ ಎಷ್ಟು ಬಗೆಯ ಅಲಂಕಾರಗಳಿದ್ದರೂ ಅದು ಶುಷ್ಕಪ್ರಬಂಧವೇ. "ಉತ್ಕರ್ಷಹೇತವಃ ಪ್ರೋಕ್ತಾಃ ಗುಣಾಲಂಕಾರರೀತಿಯಃ" ಕವಿತ್ವದ ಗುಣ, ಅಲಂಕಾರ, ರೀತಿ ಇವು ಸಾರ್ಥಕವಾಗುವುದು ರಸೋತ್ಕರ್ಷದಿಂದಲೇ.

ಗ್ರಂಥದ ರೀತಿ ಅಥವಾ ಶೈಲಿಯು ಅದರ ವಿಷಯಕ್ಕನುಗುಣವಾಗಿರುವುದೆಂದೂ, ಶಾಸ್ತ್ರಗಳದು ವಾಚ್ಯರೀತಿಯೆಂದೂ, ಕಾವ್ಯಗಳದು ವ್ಯಂಗ್ಯರೀತಿಯಂದು ಹಿಂದೆ ಹೇಳಿರುವೆವಲ್ಲವೆ? ಅಷ್ಟೇ ಅಲ್ಲ. ಎರಡು ಗ್ರಂಥಗಳು ಕಾವ್ಯಗಳೇ ಆಗಿದ್ದರೂ ಅವುಗಳ ಶೈಲಿ ಬೇರೆ ಬೇರೆಯಾಗಿರಬಹುದು. ಅರ್ಜುನದಿಗ್ವಿಜಯ ವರ್ಣನೆಯ ಶೈಲಿಯೂ ಅಮಲ್ದಾರರ ಜಮಾಬಂದಿಯ ವರ್ಣನೆಯ ಶೈಲಿಯೂ ಒಂದೇ ತೆರನಾದುದಾಗಲಾರದು. ಆಂಜನೇಯ ಸಮುದ್ರವನ್ನು ದಾಟಿದ ಪರಿಯನ್ನು ವರ್ಣಿಸುವ ರೀತಿಯಲ್ಲಿ ಗುಬ್ಬಿಯ ಹಾರಾಟವನ್ನು ವರ್ಣಿಸಲಾದೀತೆ? ಹೀಗೆ ಒಂದು ಕಡೆ ಕಾವ್ಯದ ವಿಷಯ ಶೈಲಿಗಳು ಪರಸ್ಪರ ಅಂಗಾಂಗಿಭಾವದಿಂದ ಅಭೇದ್ಯವಾಗಿರುವಲ್ಲಿ, ಇನ್ನೊಂದು ಕಡೆ ಕೂಡಿಕೊಂಡಿರುವುವು. ಅವನು ಪಾಂಡಿತ್ಯ ಹೆಮ್ಮೆಯುಳ್ಳವನಾದರೆ ಅವನ ಗ್ರಂಥದಲ್ಲಿ ವಾಗಾಡಂಬರವು ಹೆಚ್ಚಾಗಿರುವುದು; ಅವನು ನಿಶ್ಚಯಬುದ್ಧಿಯಿಲ್ಲದವನಾದರೆ ಅವನ ವಿಷಯ ನಿರೂಪಣೆಯಲ್ಲಿ ನಿಷ್ಕೃಷ್ಟಾಂಶವೇನೆಂಬುದು ಸ್ಪಷ್ಟವಾಗದೆ ಇರುವುದು. ಅವನ ಬುದ್ಧಿಯ ಸಂಚಾರದಲ್ಲಿ ಒಂದು ಕ್ರಮವಿಲ್ಲದಿದ್ದರೆ ಅವನ ಗ್ರಂಥದಲ್ಲಿ ಒಂದು ಕ್ರಮವಿಲ್ಲದೆಯೂ ಅವನು ಜಾಗರೂಕ ಸ್ವಭಾವದವನಾದರೆ ಅವನ ಮಾತುಗಳು ಎಚ್ಚರದಿಂದ ಆರಿಸಿದವುಗಳಾಗಿಯೂ, ಅವನು ಸೂಕ್ಷ್ಮ ವಿಚಾರದಲ್ಲಿ ಆಸಕ್ತನಾದರೆ ಅವನ ವಾಕ್ಯಸರಣಿಯು ಶಾಖೋಪಶಾಖೆ ಗಳಿಂದೊಡಗೂಡಿಯೂ, ಅವನ ಖಂಡಿತವಾದಿಯಾದರೆ ಅವನ ಹೇಳಿಕೆಯು ಘಂಟಾಘೋಷ ವಾಗಿಯೂ ಅವನು ನಾಜೂಕಿನವನಾದರೆ ಅವನ ಅಭಿಪ್ರಾಯವು ವಾಕ್ಯದ "ಧ್ವನಿ"ಯಿಂದಲೇ ಹೊರಪಡುವುದಾಗಿಯೂ ಇರುವುದು. ಇಂಗ್ಲಿಷಿನಲ್ಲಿ "The style is the man" ಎಂದು ಹೇಳುವುದುಂಟು. ಮಾತೇ ಮನುಷ್ಯ; ಮನುಷ್ಯನೇ ಮಾತು. ಹೇಗೆಂದರೆ ಮನಸ್ಸೇ ಮಾತು, ಅದೇ ಮನಸ್ಸೇ ಮನುಷ್ಯ. ಹೀಗೆ ಲೇಖಕನ ವಿಷಯ ಸ್ವಭಾವ ಇವೆರಡೂ ಅವನ ಗ್ರಂಥದ ರೀತಿ ಅಥವಾ ಶೈಲಿಯನ್ನು ಗೊತ್ತುಮಾಡುತ್ತವೆ. ಆದರೆ ಅವನ ವಿಷಯವನ್ನು

ಗೊತ್ತುಮಾಡುವುದೂ ಅವನ ಸ್ವಭಾವವೇ ಆದಕಾರಣ, ಕಾವ್ಯವು ಒಟ್ಟಿನ ಮೇಲೆ ಕವಿಯ ಅಂತರಂಗದ ಪ್ರತಿಬಿಂಬವೆಂದು ಹೇಳುವುದು ಯಥಾರ್ಥವೆಂದು ತೋರುವುದು.

ಸಂಸ್ಕೃತದಲ್ಲಿ ಸಾವಿರಾರು ಕಾವ್ಯನಾಮಕ ಪ್ರಬಂಧಗಳು ಹುಟ್ಟಿದುವು. ಅವುಗಳಲ್ಲಿ ಜೀವಿಸಿರತಕ್ಕುವು–ಎಂದರೆ ಪ್ರಚಾರದಲ್ಲಿರತಕ್ಕುವು ಅಥವಾ ಜನರ ಗಮನದಲ್ಲಿರತಕ್ಕುವು– ಕೆಲವು ಮಾತ್ರವೇ. ಕನ್ನಡದಲ್ಲಿಯೂ ಹೀಗೆಯೇ. ಅಳಿದು ಹೋದವು ಹೋಗಲು ಕಾರಣವು ಅವುಗಳಲ್ಲಿ ಅಲಂಕಾರ ಪಾಂಡಿತ್ಯಗಳಿರಲಿಲ್ಲವೆಂಬುದಲ್ಲ; ಬಹುಶಃ ಅವು ಅತಿಯಾಗಿದ್ದು ವೆಂಬುದು. ಮಗನಿಗೆ ಹೆಣ್ಣು ಕೇಳುವುದಕ್ಕೆಂದು ಹೋಗಿ ತನ್ನ ಕುಲವನ್ನೂ ಪ್ರತಾಪವನ್ನೂ ಔದಾರ್ಯವನ್ನು ಕೊಚ್ಚಿಕೊಳ್ಳಲಾರಂಭಿಸಿ ಸೊಸೆಯನ್ನು ಸಂಪಾದಿಸಿಕೊಳ್ಳುವುದೊಂದನ್ನು ಮಾತ್ರ ಮರೆತ ದೊಡ್ಡಮನುಷ್ಯನಂತೆ ನಮ್ಮ ಪಂಡೀತರನೇಕರು ಕಾವ್ಯರಚನೆಗೆ ಕೈಹಾಕಿ ಸಮುದ್ರವನ್ನೂ ಸೂಳೆಗೇರಿಯನ್ನೂ ವರ್ಣಿಸುವುದರಲ್ಲಿಯೇ ವಿದ್ಯಾ ಬುದ್ಧಿಗಳನ್ನು ವೆಚ್ಚಮಾಡಿ ಕಾವ್ಯದ ಮುಖ್ಯಾಂಶವನ್ನು ಮಾತ್ರ ಒಂದು ಮೂಲೆಗೊತ್ತಿರುವರು. ಸಾಮಾನ್ಯಜನರು ವಿದ್ವಾಂಸರಲ್ಲ; ಅಲಂಕಾರಗಳೆಷ್ಟು ವಿಧವೆಂಬುದು ಅವರಿಗೆ ಗೊತ್ತಿರುವುದಿಲ್ಲ; ವ್ಯಾಕರಣ ಸೂಕ್ಷ್ಮಗಳು ಅವರ ಕಣ್ಣಿಗೆ ಬೀಳುವುದಿಲ್ಲ; ಆದರೆ ಅವರ ಹೃದಯಗಳಲ್ಲಿ ಗದ್ದಲವಿಲ್ಲದಿರುವುದರಿಂದ ಅವರು ಭಾರತವು ಮಹಾಕಾವ್ಯವೆಂಬುದನ್ನೂ ಉದ್ಭಟಕಾವ್ಯವು ಅಲ್ಪಕೃತಿಯೆಂಬುದನ್ನೂ ಕಂಡುಕೊಳ್ಳ ಬಲ್ಲವರಾಗುತ್ತಾರೆ. ರಸಿಕರಾದ ಪಂಡಿತರು ಈ ತಾರತಮ್ಯವನ್ನು ಮತ್ತಷ್ಟು ಸುಲಭವಾಗಿ ಕಾಣುವರೆಂಬುದು ಸಹಜವಾಗಿಯೇ ಇದೆ. ಆದರೆ ಸಾಮಾನ್ಯಜನರ ಅಭಿಪ್ರಾಯವೇ ಕಾವ್ಯ ವಿಷಯದಲ್ಲಿ ಸರ್ವದಾ ಗ್ರಾಹ್ಯವೆಂದು ನಾವು ಹೇಳತಕ್ಕವರಲ್ಲ. ಕವಿಯು ಗಹನವಾದ ವಿಷಯಕ್ಕೆ ಕೈಹಾಕಿದರೆ ಅದನ್ನರಿಯಬೇಕೆನ್ನುವವರು ತಕ್ಕ ಮನಸ್ಸಂಸ್ಕಾರವನ್ನು ಪಡೆದಿರಬೇಕು. ಒಂದೊಂದು ವೇಳೆ ಸಾಮಾನ್ಯ ಜನರಿಗೆ ಕವಿಯ ಮಾತು ಒಗಟೆಯಂತೆ ತೋರಬಹುದು; ಅವನ ಗುಟ್ಟಿಗೆ ಅವರು ಅಪಾರ್ಥವನ್ನು ಕಲ್ಪಿಸಬಹುದು. ಇಂತಹ ಸಂದರ್ಭದಲ್ಲಿ ಸರಸಿಗಳಾದ ವಿದ್ವಾಂಸರ ವಾಕ್ಯವು ಪ್ರಮಾಣವಾಗುವುದು. ಇಂತಹವರಿಗೂ ಒಂದೊಂದು ಸಮಯದಲ್ಲಿ ಒಬ್ಬ ಕವಿಯ ಗುಣವಿಶೇಷವು ಅವಗಾಹನೆಗೆ ಬಾರದಿರಬಹುದು. ಆ ಕವಿಯು ದುರದೃಷ್ಟಶಾಲಿಯೇ ಸರಿ. ಕೆಲವು ದಿನಗಳು ಕಳೆದ ಬಳಿಕವಾದರೂ–ಅವನಲ್ಲಿ ಗುಣವಿರುವುದು ದಿಟವಾದರೆ–ಅವನಿಗೆ ತಕ್ಕ ಪುರಸ್ಕಾರ ದೊರೆಯದೆ ಹೋಗದು. ಇಷ್ಟರ ಮೇಲೆ ಇಂತಹ ಕವಿಗಳ ವಿಚಾರವು ನಮಗೆ ಪ್ರಕೃತೋಪಯೋಗಿಯಲ್ಲ. ನಮ್ಮ ದೋಟಿಗೆ ಸಿಕ್ಕದಷ್ಟು ಎತ್ತರವಾಗಿ ಮರದ ಮೇಲಿರುವ ಹಣ್ಣಿನ ರುಚಿಯನ್ನೂ, ನಮ್ಮ ಗುದ್ದಲಿಗೆ ಸಿಕ್ಕದಷ್ಟು ಆಳವಾಗಿ ಭೂಮಿಮೇಲಿರುವ ರತ್ನದ ಕಾಂತಿಯನ್ನೂ ಕುರಿತು ನಾವು ಚರ್ಚಿಸಿ ಫಲವೇನು? ಸಾಧಾರಣವಾಗಿ ಯಾವ ಕಾವ್ಯವು ಸಾಮಾನ್ಯ ಜನರ ಆದರಣೆಗೂ ವಿದ್ವಾಂಸರ ಅಂಗೀಕಾರಕ್ಕೂ ಪಾತ್ರವಾಗುವುದೋ ಅದು ಉತ್ತಮಕಾವ್ಯವೆಂದು ಹೇಳಲು ಅಡ್ಡಿಯಿರದು.

*(ಕೃಪೆ: ಪ್ರಬುದ್ಧ ಕರ್ನಾಟಕ, ವಿನಾಯಕ ಸಂಚಿಕೆ: ೧೯೨೩)*



# ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ

• *ಟಿ. ಎ. ಶ್ರೀನಾಥಶಾಸ್ತ್ರೀ*

ಪ್ರತಿವರ್ಷದ ಎಸ್ಎಸ್ಎಲ್ಸಿ ಮತ್ತು ಪಿಯುಸಿ ಪರೀಕ್ಷೆಗಳ ಫಲಿತಾಂಶಗಳಲ್ಲಿ ಶೇಕಡಾವಾರು ಉತ್ತೀರ್ಣ ಮತ್ತು ಅಂಕ ಗಳಿಕೆಯಲ್ಲಿ ಬೆಂಗಳೂರಿಗಿಂತ ಗ್ರಾಮಾಂತರ ಪ್ರದೇಶಗಳ ವಿದ್ಯಾರ್ಥಿಗಳು ಮೇಲುಗೈ ಪಡೆಯುತ್ತಿದ್ದಾರೆಂಬುದು ಎಲ್ಲರಿಗೂ ತಿಳಿದ ವಿಷಯ; ಇದರಿಂದ ನಗರಪ್ರದೇಶದ ಪೋಷಕರು ಆತಂಕಗೊಳ್ಳುತ್ತಾರೆ, ಗ್ರಾಮೀಣ ಪ್ರದೇಶದವರು ಅಚ್ಚರಿ ಗೊಳ್ಳುತ್ತಾರೆ; ಹೀಗೆ ಫಲಿತಾಂಶಗಳಲ್ಲಿ ನಗರ ಪ್ರದೇಶಗಳ ವಿದ್ಯಾರ್ಥಿಗಳು ಹಿಂದುಳಿದಿರುವುದಕ್ಕೆ ಕಾರಣಗಳನ್ನು ಅಧ್ಯಯನ ಮಾಡಬೇಕೆಂಬ ಹೇಳಿಕೆಗಳೂ ಪ್ರಕಟವಾಗುತ್ತವೆ. ಆದರೆ ಇದರ ಇನ್ನೊಂದು ಮುಖವಾಗಿ, ನಗರ ಪ್ರದೇಶಗಳ ಮಕ್ಕಳು ಇಂಗ್ಲಿಷ್‌ನಲ್ಲಿ ಸಲೀಸಾಗಿ ಮಾತನಾಡುತ್ತಾ ಗ್ರಾಮಾಂತರ ಪ್ರದೇಶಗಳಿಂದ ಬರುವ ವಿದ್ಯಾರ್ಥಿಗಳಿಗೆ ನ್ಯಾಯವಾಗಿ ದೊರಕ ಬಹುದಾದ ಅವಕಾಶಗಳನ್ನು ಹಾಳಮಾಡುತ್ತಿದ್ದಾರೆಂಬ ಆತಂಕದ ಕೂಗೂ ಕೇಳಿಬರುತ್ತಿದೆ. ಈ ಹಿನ್ನೆಲೆಯಲ್ಲಿ ಶಿಕ್ಷಣಕ್ಷೇತ್ರವನ್ನು ಕಳೆದ ಕೆಲವಾರು ವರ್ಷಗಳಿಂದ ಕಾಡುತ್ತಿರುವ ಭಾಷೆ ಮತ್ತು ಭಾಷಾಮಾಧ್ಯಮ ಸಮಸ್ಯೆಗಳನ್ನು ಈ ಮುಂದೆ ಚರ್ಚಿಸಲಾಗಿದೆ.

ವೈಮಾನಿಕೀಯ ಸಂಶೋಧನೆ ಮತ್ತು ಅಭಿವೃದ್ಧಿ ಮಂಡಲಿ ಯವರ (AR & DB-Aeronautical Research and Development Board) ಅನುದಾನಿತ ಪರಿಯೋಜನೆ ಗಳನ್ನು ಪರಾಮರ್ಶಿಸುವ ಸಲುವಾಗಿ ನಡೆಸುವ ವಾರ್ಷಿಕ ಸಭೆಯಲ್ಲಿ ಭಾಗವಹಿಸಲು ಏಪ್ರಿಲ್ ೨೦೦೪ರಲ್ಲಿ ಕಾನ್ಪುರ ದಲ್ಲಿರುವ ಐಐಟಿಗೆ (Indian Institute of Technology) ಹೋಗಿದ್ದೆ. ಮೂರನೆಯ ದಿನ ಮಧ್ಯಾಹ್ನ ಭೋಜನಾನಂತರ

ಕಾನ್ಪುರ, ಮದರಾಸು, ಮುಂಬಯಿ, ನವದೆಹಲಿ ಮುಂತಾದ ಕಡೆ ಇರುವ ವಿವಿಧ ಐಐಟಿಗಳ ಹಲವು ಹಿರಿಯ ಪ್ರಾಧ್ಯಾಪಕರು ಮತ್ತು ಸಮ್ಮೇಳನಕ್ಕೆ ಬಂದಿದ್ದ ವಿಜ್ಞಾನಿಗಳು ಮಾತನಾಡುತ್ತ ಕುಳಿತಾಗ ಐಐಟಿ ವಿದ್ಯಾರ್ಥಿಗಳ ಪರಿಯೋಜನಾ ಚಟುವಟಿಕೆಗಳ ಬಗ್ಗೆ ಮಾತು ಬಂದಿತು. ಆಗ

"ಇತ್ತೀಚಿನ ಒಂದೆರಡು ವರ್ಷಗಳಿಂದ ಐಐಟಿಗಳಿಗೆ ಬರುತ್ತಿರುವ ಬಹಳಷ್ಟು ವಿದ್ಯಾರ್ಥಿಗಳಿಗೆ ತಮ್ಮ ವಿಶೇಷ ಪರಿಣತೆಯ ವಿಷಯದಲ್ಲಿ ಆಳವಾದ ಹಾಗೂ ಮೂಲಭೂತ ಪರಿಜ್ಞಾನವಿರುವುದಿಲ್ಲ; ಅವರು ಸಂಶೋಧನಾ ಕಾರ್ಯಗಳನ್ನು ಕೈಗೊಳ್ಳಲು ಯೋಗ್ಯರಲ್ಲ" ಎಂದು ಕಾನ್ಪುರದ ಪ್ರೊಫೆಸರ್ ಒಬ್ಬರು ಹೇಳಿದ್ದು ಎಲ್ಲರ ಕುತೂಹಲಕ್ಕೆ ಕಾರಣವಾಯಿತು; ಇತ್ತೀಚಿನ ದಿನಗಳಲ್ಲಿ ಐಐಟಿಗೆ ಹೊಸದಾಗಿ ಸೇರುತ್ತಿರುವ ವಿದ್ಯಾರ್ಥಿಗಳ ತಿಳಿವಳಿಕೆಯ ಬಗ್ಗೆ ಚರ್ಚೆ ಆರಂಭವಾಯಿತು.

'ಐಐಟಿ ಸೇರಲು ಅರ್ಜಿ ಹಾಕುವವರು ಅರ್ಹತಾ ಪದವಿಯ ಪರೀಕ್ಷೆಯಲ್ಲಿ ಶೇಕಡ ೭೫ರಿಂದ ೯೫ರ ವರೆಗೂ ಅಂಕಗಳನ್ನು ಗಳಿಸಿರುತ್ತಾರಲ್ಲವೆ' ಎಂದು ನಮ್ಮಲ್ಲಿ ಒಬ್ಬರ ಉದ್ಗಾರ.

'ಅದೇನೋ ಸರಿ. ಆದರೆ ಅಂಕ ಗಳಿಕೆಯೇ ಬುದ್ಧಿವಂತಿಕೆಗೆ ಅಳತೆಗೋಲಲ್ಲ' ಎಂದು ಮತ್ತೊಬ್ಬರು.

'ಐಐಟಿ ಪ್ರವೇಶ ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತರಿಸುತ್ತಾರೆ. ಆದರೆ ಮೌಖಿಕ ಸಂದರ್ಶನದಲ್ಲಿ ಮುಗ್ಗರಿಸುತ್ತಾರೆ; ವಿಷಯದ ಬಗ್ಗೆ ತಳಸ್ಪರ್ಶಿ ಜ್ಞಾನವಿರುವುದಿಲ್ಲ; ಐಐಟಿ ಸೇರಿದನಂತರ ಅವುಗಳನ್ನು ಕಲಿಯುತ್ತಾರೆ ಎಂದು ನಿರೀಕ್ಷಿಸಲೂ ಆಗದು; ಏಕೆಂದರೆ ತಾವು ಕಲಿಯುವ ವಿಚಾರಗಳ ಆಂತರ್ಯವನ್ನು ತಿಳಿಯಬೇಕೆಂಬ ಪ್ರವೃತ್ತಿಯನ್ನು ಅವರು ಬೆಳೆಸಿಕೊಂಡಿರುವುದಿಲ್ಲ' – ಮುಂತಾದ ಅಭಿಪ್ರಾಯಗಳು ಚರ್ಚೆಯ ಕಾಲದಲ್ಲಿ ಹೊರಹೊಮ್ಮಿದವು.

ಪದವಿ ಮಟ್ಟದಲ್ಲಿ ವಿದ್ಯಾರ್ಥಿಗಳು ಹೆಚ್ಚು ಕಡಮೆ ಸ್ವತಂತ್ರರಾಗಿರುತ್ತಾರೆ; ನಿಗದಿತ ಪಾಠಗಳನ್ನು ಕಲಿಯಲು ಸಾಮಾನ್ಯವಾಗಿ ಅಧ್ಯಾಪಕರನ್ನು ಅವಲಂಬಿಸಿರುವುದಿಲ್ಲ; ಗ್ರಂಥಾಲಯಗಳು, ಖಾಸಗಿಯಾಗಿ ಪಾಠಕಲಿಕೆ ಮುಂತಾದವುಗಳಿಗೆ ಮೊರೆ ಹೋಗುತ್ತಾರೆ; ಆದರೆ ಸಾಮಾನ್ಯವಾಗಿ ಅವರ ದೃಷ್ಟಿ ಕೇವಲ ಪರೀಕ್ಷೆಯ ಕಡೆಗೆ, ಹೆಚ್ಚು ಅಂಕ ಗಳಿಸಬೇಕೆಂಬುದೇ ಅವರ ಆತಂಕ ಎಂಬುದು ಅಲ್ಲಿ ಸೇರಿದ್ದ ಎಲ್ಲರ ಒಟ್ಟು ಅಭಿಪ್ರಾಯ.

ಅಂದರೆ ಈಗಿನ ಬಹಳಷ್ಟು ಅಂದರೆ ನೂರಕ್ಕೆ ೮೫ರಿಂದ ೯೦ ವಿದ್ಯಾರ್ಥಿಗಳಿಗೆ, ಅವರು ಎಷ್ಟೇ ಚಟುವಟಿಕೆಯಿಂದ ಇದ್ದರೂ, ಎಷ್ಟೇ ಉತ್ಸಾಹವಿದ್ದರೂ ಅವರಿಗೆ ವಿಷಯಗಳ ಮೂಲವನ್ನು ಅರಸಿ ಹೋಗುವ ಜಾಯಮಾನ ಇಲ್ಲ; ಈ ಪ್ರವೃತ್ತಿ ಅವರಲ್ಲಿ ಬೆಳೆದಿಲ್ಲ; ಇದೇಕೆ ಹೀಗೆ? ಎಂಬುದೇ ಅಲ್ಲಿ ನೆರೆದಿದ್ದ ಎಲ್ಲರ ಆತಂಕದ ಪ್ರಶ್ನೆ; ಎಲ್ಲರಿಗೂ ಪ್ರಶ್ನೆಗೆ ಉತ್ತರ ಹುಡುಕುವ ಕಾತರ.

ಹಾಗಿದ್ದಲ್ಲಿ ಈ ಪ್ರವೃತ್ತಿಯನ್ನು ಬೇಕೆಂದಾಗ, ಅಗತ್ಯವೆನಿಸಿದಾಗ ರೂಢಿಸಿಕೊಳ್ಳಲು ಸಾಧ್ಯವಿಲ್ಲವೇ ಎಂದು ಚಿಂತಿಸಿದಾಗ ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ' ಎಂಬ ಸಾರ್ವತ್ರಿಕ ಸತ್ಯ ಎಲ್ಲರ ಮನಸ್ಸಿಗೆ ಬಂದಿತು.

ಅಂದರೆ ತಾವು ಕಲಿಯುವ ವಿಷಯಗಳನ್ನು ಕುರಿತು ಕುತೂಹಲವನ್ನು ಬೆಳೆಸಿಕೊಳ್ಳುವ, ಆಳವಾಗಿ ಯೋಚಿಸುವ, ಆ ಬಗ್ಗೆ ಮನದಲ್ಲಿ ಮಂಥನ ಮಾಡುವ ಪ್ರವೃತ್ತಿ ಚಿಕ್ಕ ವಯಸ್ಸಿನಲ್ಲಿ ಬರದಿದ್ದರೆ ಅದು ಮುಂದೆಂದೂ ಸಾಧ್ಯವಿಲ್ಲ; ಈ ರೀತಿಯ ಮನೋಭಾವ ಬೆಳೆಯುವುದು ಬಹಳಷ್ಟು ಮಕ್ಕಳಿಗೆ ಸುಮಾರು ೧೨ ಅಥವಾ ೧೫ ವರ್ಷದೊಳಗಿನ ಚಿಕ್ಕಂದಿನಲ್ಲೇ ಹೊರತು ಅನಂತರದಲ್ಲಿ ಅಲ್ಲ ಎಂಬುದು ಐಐಟಿಯಲ್ಲಿ ಸೇರಿದ್ದ ಎಲ್ಲರ ಗಂಭೀರ ಚರ್ಚೆಯ ಪ್ರಮುಖ ಅಭಿಪ್ರಾಯವಾಗಿ ಹೊರಹೊಮ್ಮಿತು. ಅರ್ಥಾತ್, ಇಂದಿನ ಬಹುತೇಕ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿನ ವಿದ್ಯಾಭ್ಯಾಸವೇ ಮುಳುವಾಗುತ್ತಿರುವ ಅಂಶ ಈ ಚರ್ಚೆಯ ಫಲಿತವಾಯಿತು.

### ಬುದ್ಧಿ ಶಕ್ತಿ : ಒಂದು ವೈಜ್ಞಾನಿಕ ವಿಶ್ಲೇಷಣೆ

ಮಾನವನ ಮೆದುಳು, ಬುದ್ಧಿಶಕ್ತಿ ಮುಂತಾದವನ್ನು ಕುರಿತು ವಿಶ್ವಾದ್ಯಂತ ಮನಶ್ಶಾಸ್ತ್ರಜ್ಞರು ನಡೆಸಿರುವ ಸಂಶೋಧನೆಗಳ ಹಾಗೂ ಫಲಿತಾಂಶಗಳ ಅವಲೋಕನ ಈ ಸಂದರ್ಭದಲ್ಲಿ ಬಹುಮುಖ್ಯವೆನಿಸುತ್ತದೆ.

ಮಾನವನ ಬುದ್ಧಿಯನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು. ಇದರಲ್ಲಿ ಸ್ಮರಣೆಯು ಅತ್ಯಗತ್ಯವಾದ ವಿಭಾಗ. ಇದರಲ್ಲಿ ಬಗೆಬಗೆಯ ಮಾಹಿತಿಗಳು ಶೇಖರಗೊಳ್ಳುತ್ತವೆ. ಮತ್ತೆ ಮತ್ತೆ ಹೆಕ್ಕಿ ತೆಗೆದು ಬಳಸುವ ಮಾಹಿತಿಗಳು ಮೆದುಳಿನ ವಿಶಿಷ್ಟ ಭಾಗದಲ್ಲಿ ಇರುತ್ತವೆ. ಉಪಯೋಗಿಸದೇ ಇರುವ ಮಾಹಿತಿಗಳು ಮೆದುಳಿನಿಂದ ಹೊರಹಾಕಲ್ಪಡುತ್ತವೆ. ಇವೆಲ್ಲ ಒಂದು ಬಗೆಯ ರಾಸಾಯನಿಕ ಕ್ರಿಯೆಗಳಾಗಿರುತ್ತವೆ.

ಬುದ್ಧಿವಂತಿಕೆಯ ಮುಂದಿನ ಮುಖ್ಯ ಭಾಗವೆಂದರೆ ಅರಿವಿನ ಶಕ್ತಿ. ಅಂದರೆ ಮಾಹಿತಿಗಳನ್ನು ಪರಸ್ಪರ ಹೊಂದಿಸಿ ಅವುಗಳು ತಿಳಿಸುವ ವಿಷಯಗಳ ಮರ್ಮಗಳನ್ನು ಅರಿತುಕೊಳ್ಳುವುದು. ಈ ಅರ್ಥಮಾಡಿಕೊಳ್ಳುವ ಶಕ್ತಿ ಬುದ್ಧಿಶಕ್ತಿ ಬೆಳವಣಿಗೆಯ ಒಂದು ಮುಖ್ಯವಾದ ಹಂತವಾಗಿದೆ.

ಮುಂದೆ ಚಿಕ್ಕಚಿಕ್ಕ ಪ್ರಶ್ನೆಗಳು ಎದುರಾದಾಗ ಪ್ರಶ್ನೆಯಲ್ಲಿನ ವಿಚಾರಗಳೊಡನೆ ಮೆದುಳಿನಲ್ಲಿ ಶೇಖರವಾಗಿರುವ ಮಾಹಿತಿಗಳ ಪೈಕಿ ಅನೇಕವನ್ನು ಬಳಸಿಕೊಂಡು ಮೆದುಳು ಸೂಕ್ತವಾದ ಉತ್ತರಗಳನ್ನು ಕಂಡುಕೊಳ್ಳುವುದು. ಅರಿವಾದ ವಿಷಯಗಳನ್ನು ನೆನಪಿನಲ್ಲಿರುವ ಮಾಹಿತಿ ಗಳೊಂದಿಗೆ ಬೆರಸಿ ಹೊಸ ಅರ್ಥಗಳನ್ನು ಕಂಡುಕೊಳ್ಳುವುದೇ ಬುದ್ಧಿಶಕ್ತಿಯ ಈ ಮೂರನೆಯ ಭಾಗದ ಕ್ರಿಯೆಯಾಗಿದೆ.

ಇನ್ನು ನಾಲ್ಕನೆಯದಾಗಿ ಈ ಮೂರು ವಿಭಾಗಗಳಿಂದ ಸಿದ್ಧವಾಗುವ ಎಲ್ಲ ಮಾಹಿತಿಗಳನ್ನು ವಿವೇಚಿಸಿ ಹೊಸ ವಿಚಾರಗಳಿಗೆ ನಾಂದಿ ಹಾಡುವುದು. ಇದೇ ಸ್ವತಂತ್ರ ಬುದ್ಧಿಮತ್ತೆ. ಇದು

ವ್ಯಕ್ತಿತ್ವ ಹಾಗೂ ಬುದ್ಧಿಶಕ್ತಿಯ ಬೆಳವಣಿಗೆಗೆ ಅಗತ್ಯವಾದ ಬಹುಮುಖ್ಯವಾದ ಕ್ರಿಯೆಯಾಗಿರುತ್ತದೆ. ಇದು ಎಲ್ಲರೂ ಅಪೇಕ್ಷಿಸುವ ಹಾಗೂ ಎಲ್ಲರೂ ನಿರೀಕ್ಷಿಸುವ ಕ್ರಿಯೆಯಾಗಿರುತ್ತದೆ.

ಹುಟ್ಟಿದಾಗಿನಿಂದಲೂ ಈ ನಾಲ್ಕೂ ಬಗೆಯ ಬುದ್ಧಿಯ ಅಂಗಗಳು ಮನುಷ್ಯನ ಮೆದುಳಿನಲ್ಲಿ ಕಾರ್ಯ ನಿರ್ವಹಿಸಲಾರಂಭಿಸುತ್ತವೆ. ಇವುಗಳನ್ನು ಸಮರ್ಥವಾಗಿ ಉಪಯೋಗಿಸಲು ಸರಿಯಾದ ವಿಚಾರಗಳನ್ನು ನೀಡುವ ವಿದ್ಯಾಭ್ಯಾಸ ಅಗತ್ಯ. ಮೆದುಳಿನ ವಿವಿಧ ಭಾಗಗಳ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳೇ ಮಾನವರ ನಡುವಿನ ಬುದ್ಧಿವಂತಿಕೆಯ ವ್ಯತ್ಯಾಸಕ್ಕೆ ಕಾರಣವಾಗುತ್ತದೆ.

ಬಹುಮುಖ್ಯವಾದ ವಿಚಾರವೆಂದರೆ, ಈ ವಿಚಾರಗಳನ್ನು ಆಳವಾಗಿ ಅಧ್ಯಯನ ಮಾಡಿರುವ ಎಲ್ಲ ವಿಜ್ಞಾನಿಗಳೂ, ವಿಚಾರವಂತರೂ ತಿಳಿಸುವುದು "ಮೆದುಳಿನ ಈ ನಾಲ್ಕು ವಿಭಾಗಗಳ ಗರಿಷ್ಠ ಚಟುವಟಿಕೆಗೆ ಅವಕಾಶವು ಯಾವುದೇ ವ್ಯಕ್ತಿಯ ಹತ್ತು ಅಥವಾ ಹನ್ನೆರಡು ವರ್ಷದೊಳಗೆ ಮಾತ್ರ ದೊರಕಬೇಕು. ಈ ನಾಲ್ಕು ವಿಭಾಗಗಳ ಸರಿಯಾದ ವಿಕಸನ ಈ ವಯಸ್ಸಿನೊಳಗೆ ಮಾತ್ರ ಆಗುತ್ತದೆ. ಅದರಲ್ಲೂ ಬುದ್ಧಿಶಕ್ತಿಯ ಮೂರು ಮತ್ತು ನಾಲ್ಕನೆಯ ಹಂತಗಳ ವಿಕಸನದಲ್ಲಿ ಮಕ್ಕಳಿಗೆ ನೀಡುವ ವಿದ್ಯಾಭ್ಯಾಸ ಕ್ರಮವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ." ಇಂತಹ ಅಮೂಲ್ಯ ವಿದ್ಯಾಭ್ಯಾಸಕ್ಕೆ ಅಗತ್ಯವಾದ ವೈಜ್ಞಾನಿಕವಾದ ಭಾಷೆ, ಪಠ್ಯಕ್ರಮ ಮುಂತಾದವುಗಳ ಲಾಭ ಪಡೆದ ವಿದ್ಯಾರ್ಥಿಯು ಕೇವಲ ಹತ್ತಾರು ದಿನಗಳಲ್ಲಿ ಪಡೆಯುವ ಜ್ಞಾನವನ್ನು, ಬಾಲ್ಯದಲ್ಲಿ ಇವುಗಳಿಂದ ವಂಚಿತರಾದವರು ಅನಂತರ ತೀವ್ರ ವಿದ್ಯಾಭ್ಯಾಸಕ್ಕೆ ತೊಡಗಿದರೂ ಬಹು ದೀರ್ಘಕಾಲ (ಅನೇಕ ಬಾರಿ ಹಲವಾರು ವರ್ಷಗಳ ಕಾಲ) ಶ್ರಮ ಪಡಬೇಕಾಗುತ್ತದೆ. ಇಂತಹ ಅನೇಕ ಉದಾಹರಣೆಗಳನ್ನು ತಜ್ಞರು ನೀಡಿದ್ದಾರೆ.

## ಇಂದಿನ ವಿದ್ಯಾಭ್ಯಾಸದ ಪರಿಸ್ಥಿತಿ

ಹಾಗಿದ್ದಲ್ಲಿ ಆರಂಭದ ಹಂತಗಳಲ್ಲಿನ ಅಂದರೆ ವಿದ್ಯಾರ್ಥಿಗಳ ೧೨ ವರ್ಷದೊಳಗಿನ ವಿದ್ಯಾಭ್ಯಾಸಕ್ಕೆ ಈಗ ಏನಾಗಿದೆ? ಅಧ್ಯಾಪಕರಿಗೆ ಸರಿಯಾದ ಮಾಹಿತಿಗಳಿಲ್ಲವೇ? ಅವರು ಅಧ್ಯಾಪನ ಮಾಡಲು ಅನರ್ಹರಾಗುತ್ತಿದ್ದಾರೆಯೇ? ಮುಂತಾದ ಪ್ರಶ್ನೆಗಳು ಕಾಡಲಾರಂಭಿಸಿದವು.

ಇಂತಹ ಸಂದರ್ಭಗಳು ಸಾರ್ವತ್ರಿಕವಲ್ಲ; ಈಗಿನ ಬಹಳಷ್ಟು ಅಧ್ಯಾಪಕರಿಗೆ ಹೆಚ್ಚಿನ ಲೋಕಜ್ಞಾನವಿದ್ದು ಮಾಹಿತಿಗಳ ಮಹಾಪೂರ, ಅತ್ಯಾಧುನಿಕ ಪರಿಕರಗಳು ಹಾಗೂ ಸೌಲಭ್ಯಗಳು ದೊರೆಯು ತ್ತಿರುವುದರಿಂದ ಮೇಲ್ಕಂಡ ಅನುಮಾನಗಳಿಗೆ ಆಸ್ಪದವೇ ಇಲ್ಲ ಎಂಬ ವಿಚಾರ ಎಲ್ಲರಿಗೂ ಒಪ್ಪಿತವಾಯಿತು.

## ಸಮಸ್ಯೆಯ ಮೂಲ

ಹಾಗಿದ್ದರೆ ಸಮಸ್ಯೆಯ ಮೂಲವೆಲ್ಲಿ ಎಂಬುದು ಎಲ್ಲರ ಕುತೂಹಲದ, ಆತಂಕದ ಅಂಶವಾಯಿತು. ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಗಳಲ್ಲಿ ಇಂದಿನ ಬಹುತೇಕ ಮಕ್ಕಳು ಅನುಭವಿಸುತ್ತಿರುವ ಸಮಸ್ಯೆಗಳೇನು? ತಾವು ಕಲಿಯುವ ವಿಷಯಗಳನ್ನು ಕುರಿತು ಚಿಂತಿಸ ಲಾರದಂತೆ ಅವರಿಗೆ ತಡೆಯಾಗುತ್ತಿರುವ ಅಂಶಗಳಾವುವು? ಇದಕ್ಕೆ ಕಾರಣಗಳೇನು? ಶಿಕ್ಷಕರೆ? ಶಿಕ್ಷಣದ ವ್ಯವಸ್ಥೆಯೇ? ಪಠ್ಯವೇ? ಶಿಕ್ಷಣ ಮಾಧ್ಯಮವೇ? ಇವೇ ಮುಂತಾಗಿ ವಿಚಾರ

ವಿನಿಮಯಗಳು ಆರಂಭವಾದವು. ಅಪಾರ ಅನುಭವ ಗಳಿಸಿದ ಪ್ರಾಧ್ಯಾಪಕರು ಹಾಗೂ ವಿಜ್ಞಾನಿಗಳು ಈ ಗಂಭೀರವಾದ ವಿಚಾರಗಳನ್ನು ಕುರಿತು ಪರಸ್ಪರ ಮಾತುಕತೆಗಳನ್ನಾಡುತ್ತಲೇ ಬಾಲ್ಯದಲ್ಲಿನ ಶಿಕ್ಷಣದ ಭಾಷೆ ಮತ್ತು ಶಿಕ್ಷಣದ ಮಾಧ್ಯಮವೇ ಈ ಎಲ್ಲಾ ಸಮಸ್ಯೆಗಳಿಗೆ ಮೂಲ ಎಂಬುದನ್ನು ಕಂಡುಕೊಂಡರು. ವಿದ್ಯಾಭ್ಯಾಸದ ಗುರಿ ವಿದ್ಯಾರ್ಥಿಗಳಿಗೆ ವಿಷಯವನ್ನು ಮನದಟ್ಟು ಮಾಡಿಸಿ ಅದನ್ನು ಕುರಿತು ಚಿಂತಿಸುವ ಪ್ರವೃತ್ತಿ ಉಂಟುಮಾಡುವುದು; ಇದು ಚಿಕ್ಕಂದಿನಲ್ಲಿ ವಿದ್ಯಾರ್ಥಿಯ ಮಾತೃಭಾಷೆಯಲ್ಲಿ ಮಾತ್ರ ಸಾಧ್ಯ ಎಂಬ ನಿರ್ವಿವಾದವಾದ ನಿತ್ಯಸತ್ಯವನ್ನು ಎಲ್ಲರೂ ಒಪ್ಪಿಕೊಂಡರು.

ಆದ್ದರಿಂದ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲೇ ಆಗಬೇಕು. ಅದೇ ನಿಜವಾದ ಶಿಕ್ಷಣ. ಶಾಲೆಗೆ ಹೋಗುವ ಮಕ್ಕಳ ಮನಸ್ಸು ಅರಳಬೇಕು; ಕಲಿಕೆಯಲ್ಲಿ ಅವರಿಗೆ ಆಸಕ್ತಿ ಹುಟ್ಟಬೇಕು; ಅವರು ವಿಷಯಗಳನ್ನು ಚೆನ್ನಾಗಿ ಗ್ರಹಿಸಬೇಕು; ಗ್ರಹಿಸಿದ ವಿಷಯಗಳನ್ನು ಕುರಿತು ಚಿಂತನೆ ನಡೆಸಬೇಕು; ತಮ್ಮ ಆಲೋಚನೆಗಳನ್ನು ತಮ್ಮದೇ ವಾಕ್ಯಗಳಲ್ಲಿ, ತಮ್ಮದೇ ಆದ ಶೈಲಿಯಲ್ಲಿ ಬರೆಯಬೇಕು. ಈ ರೀತಿಯ ಪ್ರವೃತ್ತಿಯನ್ನು ಬೆಳೆಸುವುದೇ ಶಾಲೆಗಳ ಮುಖ್ಯ ಗುರಿಯಾಗಿರಬೇಕು. ಇದೇ ಸರಿಯಾದ ಶಿಕ್ಷಣ. ಇದಕ್ಕೆ ತಕ್ಕುದಾದ ಮಾಧ್ಯಮ ಯಾವುದು ಎಂಬ ಬಗ್ಗೆ ಗೊಂದಲ, ತಕರಾರುಗಳಿಗೆ ಅವಕಾಶವೇ ಇಲ್ಲ. ಪಾಠಗಳನ್ನು ಸಂತಸದಿಂದ ಕಲಿಯಬಹುದಾದ ಭಾಷೆಯೇ ಮಾತೃಭಾಷೆ, ಅದೇ ಶಿಕ್ಷಣ ಮಾಧ್ಯಮ. ಇದೇ ಸರಿ ಎಂದು ವಿಶ್ವಾದ್ಯಂತ ಎಲ್ಲಾ ಶಿಕ್ಷಣತಜ್ಞರೂ ಮತ್ತೆ ಮತ್ತೆ ಹೇಳುತ್ತಲೇ ಬಂದಿದ್ದಾರೆ.

**ಕಲಿಕೆಯ ಭಾಷೆ**

ಇನ್ನೂ ಒಂದು ಹೆಜ್ಜೆ ಮುಂದುವರಿದರೆ, ಕಲಿಕೆಯ ಭಾಷೆ ಅಕಸ್ಮಾತ್ ಮಾತೃಭಾಷೆಯಲ್ಲವಾದರೂ ಅದು ಸಹಜವಾಗಿರಬೇಕು, ವೈಜ್ಞಾನಿಕವಾಗಿರಬೇಕು. ಅದೃಷ್ಟವಶಾತ್, ಸುಸಂಬದ್ಧ ರಚನೆಯ ಭಾರತೀಯ ಭಾಷೆಗಳು ಅತ್ಯಂತ ವೈಜ್ಞಾನಿಕ, ಧ್ವನ್ಯಾತ್ಮಕ; ಮಾತು ಮತ್ತು ಈ ಭಾಷೆಗಳಲ್ಲಿನ ಬರೆವಣಿಗೆಗಳ ನಡುವೆ ಅವಿನಾಭಾವ ಸಂಬಂಧವಿದೆ. ಅಲ್ಲದೆ ಭಾರತೀಯ ಭಾಷೆಗಳೆಲ್ಲವೂ ಒಂದೇ ಸಂವಿಧಾನದ ಅಕ್ಷರಮಾಲೆಯ ಕೇವಲ ಲಿಪಿ ವ್ಯತ್ಯಾಸದ ಭಾಷೆಗಳಾಗಿವೆ. ದುರದೃಷ್ಟವಶಾತ್ ಇಂಗ್ಲಿಷ್ ಆದರೋ ಅಸಂಬದ್ಧ ರಚನೆಯ, ಅವೈಜ್ಞಾನಿಕ ಹಾಗೂ ಧ್ವನ್ಯಾತ್ಮಕವಾಗಿ ಸಂದಿಗ್ಧಮಯ ಭಾಷೆ. ಆದ್ದರಿಂದಲೇ ಪ್ರಾಥಮಿಕ ಹಂತದಲ್ಲಂತೂ ಶಿಕ್ಷಣಕ್ಕೆ ಇಂಗ್ಲಿಷ್ ಸರ್ವಥಾ ಯೋಗ್ಯವಲ್ಲ. ಇಂಗ್ಲಿಷ್ ಮಾತೃಭಾಷೆಯ ಮಕ್ಕಳಿಗೂ ಸಹ ಇದು ಅನಿವಾರ್ಯ ಪೀಡೆ. ಇನ್ನು ಇಂಗ್ಲಿಷ್ ಶಾಲೆಗಳಲ್ಲಿ ಕಲಿಯುವ ಭಾರತೀಯ ಮಕ್ಕಳಂತೂ ಆರಂಭದಿಂದಲೇ ಬರೆದಿದ್ದಕ್ಕೂ ಉಚ್ಚಾರಣೆಗೂ ಸಂಬಂಧವಿಲ್ಲದ ನೂರಾರು ಇಂಗ್ಲಿಷ್ ಪದಗಳ ಸ್ಪೆಲಿಂಗುಗಳ, ಗೊಂದಲಕ್ಕೆ ದೂಡುವ ವಾಕ್ಯರಚನೆಗಳ ಸುಳಿಯಲ್ಲಿ ಸಿಲುಕಿ ತಮ್ಮ ನಿಜವಾದ, ಸೃಜನಾತ್ಮಕ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ; ಕೇವಲ ಉರುಹೊಡೆಯುವ ಯಂತ್ರಗಳಾಗುತ್ತಾರೆ; ಸ್ವಂತಿಕೆಯಿಂದ ದೂರವಾಗುತ್ತಾರೆ. ಆದ್ದರಿಂದಲೇ ಆರಂಭದಿಂದ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ತೊಡಗುವ ನೂರಕ್ಕೆ ೮೦ರಿಂದ ೯೦ ಮಂದಿ ಮಕ್ಕಳ

- ಮನಸ್ಸು ಅರಳದು

- ಕಲಿಕೆಯಲ್ಲಿ ಆಸಕ್ತಿ ಹುಟ್ಟದು.
- ವಿಷಯಗಳನ್ನು ಚೆನ್ನಾಗಿ ಗ್ರಹಿಸಲಾರರು
- ಗ್ರಹಿಸಿದ ವಿಷಯಗಳನ್ನು ಕುರಿತು ಸರಿಯಾಗಿ ಚಿಂತನೆ ನಡೆಸಲಾರರು
- ಅಲ್ಲಿಗೂ ತಮ್ಮ ಅರಿವಿಗೆ ಬಂದ ಅಲ್ಪ ಸ್ವಲ್ಪ ವಿಷಯಗಳನ್ನು ತಮ್ಮದೇ ವಾಕ್ಯ, ಶೈಲಿ, ಧಾಟಿಯಲ್ಲಿ ಬರೆಯಲಾರರು
- ಬಹುಮುಖ್ಯವಾಗಿ, ಈ ಮೇಲಿನ ಎಲ್ಲಾ ಅಂಶಗಳಿಗೆ ಅಗತ್ಯವಾದ ಆಲೋಚನಾ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲಾರರು.

ಬಾಲ್ಯದಲ್ಲಿ ಈ ರೀತಿಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳದ ಮಕ್ಕಳು ದೊಡ್ಡವರಾಗುತ್ತಾ ಹೋದಂತೆ, ಮುಂದೆ ಇಡೀ ದೇಶದ ಬಹುಸಂಖ್ಯಾತ ಜನರ ಬೌದ್ಧಿಕಮಟ್ಟ ಕುಂಠಿತವಾಗುತ್ತಾ ಹೋಗುತ್ತದೆ. ಬುದ್ಧಿವಂತಿಕೆಗಾಗಿ ವಿಶ್ವದಲ್ಲಿ ಗಳಿಸಿರುವ ಸ್ಥಾನಮಾನವನ್ನು ನಾವು ಕಳೆದು ಕೊಳ್ಳುತ್ತೇವೆ.

ಮೇಲ್ಕಂಡ ವಿಷಯಗಳನ್ನು ಹಲವಾರು ಶಾಲಾ ಮುಖ್ಯೋಪಾಧ್ಯಾಯರು, ಅಧ್ಯಾಪಕರು ಮತ್ತು ಪದವಿಪೂರ್ವ ಕಾಲೇಜು ಪ್ರಾಂಶುಪಾಲರುಗಳು ಒಪ್ಪಿಕೊಳ್ಳುತ್ತಾರೆ; 'ಕೇವಲ ಇಂಗ್ಲಿಷ್' ವಿದ್ಯಾರ್ಥಿಗಳನ್ನು ತಮ್ಮ ವಿದ್ಯಾಸಂಸ್ಥೆಗಳಿಗೆ ಸೇರಿಸಿಕೊಳ್ಳಲು ಹಿಂಜರಿಯುತ್ತಾರೆ. ಆದರೆ ಸಾರ್ವಜನಿಕವಾಗಿ ಹೇಳಲಾರರು. ಅವರೆಲ್ಲರ ಅಭಿಪ್ರಾಯ ಕರ್ನಾಟಕದಲ್ಲಿ 'ಪ್ರಾಥಮಿಕ ಹಂತದ ವಿದ್ಯಾಭ್ಯಾಸ ಕನ್ನಡದಲ್ಲೇ ಆಗಬೇಕು' ಎಂಬುದೇ ಆಗಿದೆ.

**ಆರಂಭದ ಶಿಕ್ಷಣ ಕನ್ನಡದಲ್ಲಿ**

ಆದರೆ ಮೇಲ್ಕಂಡ ವಿಷಯಗಳನ್ನು ಕುರಿತು ಮಾತುಕತೆಯಾಡುವಾಗ ದುರದೃಷ್ಟವಶಾತ್ ಕರ್ನಾಟಕದ ಅನೇಕ ಶಾಲೆಗಳ ಅಧ್ಯಾಪಕರು, ಆಡಳಿತ ವರ್ಗದವರು ಹಾಗೂ ತಂದೆ ತಾಯಿಗಳು 'ವಿಜ್ಞಾನ, ತಂತ್ರಜ್ಞಾನ ವಿಚಾರಗಳೆಲ್ಲಾ ಇಂಗಿಷನಲ್ಲೇ ಇವೆ; ಮಕ್ಕಳಿಗೆ ಇಂಗ್ಲಿಷ್ ಬಾರದಿದ್ದರೆ ಕೀಳರಿಮೆ ಉಂಟಾಗುತ್ತದೆ; ಪ್ರಪಂಚದ ಇರತ ದೇಶಗಳೊಡನೆ ವ್ಯವಹರಿಸಲು ಇಂಗ್ಲಿಷ್ ಅತ್ಯಗತ್ಯ; ಇಂಗ್ಲಿಷ್ ಇಲ್ಲದೆ ಗತ್ಯಂತರವಿಲ್ಲ' ಎಂದು ಉದ್ಗರಿಸುತ್ತಾರೆ; 'ಆರಂಭದ ಶಿಕ್ಷಣ ಕನ್ನಡದಲ್ಲಿರಬೇಕು ಎನ್ನುವವರು ಇಂಗ್ಲಿಷ್ ಬೇಡ ಎನ್ನುತ್ತಾರೆ' ಎಂಬುದೇ ಇವರು ಗಳಿಗಿರುವ ಪೂರ್ವಾಗ್ರಹ; ಇದು ದೂರವಾಗಬೇಕು. ಇಂಗ್ಲಿಷ್‌ಬೇಕು. ಪ್ರಾಥಮಿಕ ವಿದ್ಯಾಭ್ಯಾಸದ ಶಿಕ್ಷಣ ಮಾಧ್ಯಮವು ಕನ್ನಡ ಎನ್ನುವ ಯಾರೂ ಇಂಗ್ಲಿಷ್ ಭಾಷೆಯನ್ನು ಕಲಿಸುವುದು ಬೇಡ ಎನ್ನುವುದೇ ಇಲ್ಲ. ಪ್ರಾಥಮಿಕ ಹಂತದ ನಂತರ ಇಂಗ್ಲಿಷ್ ಅನ್ನು ಚೆನ್ನಾಗಿ ಕಲಿಸಿ ಎಂದೇ ಎಲ್ಲರೂ ಹೇಳುತ್ತಾರೆ.

ಮಕ್ಕಳಿಗೆ ಸಂಬಂಧಿಸಿದಂತೆ (ಸುಮಾರು ೧೦ರಿಂದ ೧೨ ವರ್ಷವಯಸ್ಸಿನ ವರೆಗೆ) ಪ್ರಾಥಮಿಕ ಹಂತದಲ್ಲಿ ಇಂಗ್ಲಿಷ್‌ಗಿಂತಲೂ ಅತ್ಯಂತ ವೈಜ್ಞಾನಿಕ ಭಾಷೆಯಾದ ಕನ್ನಡದಲ್ಲಿ ವಿದ್ಯಾಭ್ಯಾಸ ಮಾಡಿ ವಿಷಯಗಳನ್ನು ಅರಿಯುವ, ಕಲಿತ ವಿಷಯಗಳ ಬಗ್ಗೆ ಆಲೋಚಿಸುವ. ಅವುಗಳನ್ನು ಸ್ವಂತ ವಾಕ್ಯಗಳಲ್ಲಿ ಪ್ರವೃತ್ತಿ ಹಾಗೂ ಶಕ್ತಿಗಳನ್ನು ಬೆಳೆಸಿಕೊಂಡ ಮಕ್ಕಳು ನಂತರ ಇಂಗ್ಲಿಷ್ ಅನ್ನು ಸುಲಭವಾಗಿ ಕಲಿಯಬಲ್ಲರು. ಆಗಲೂ ನೂರಾರು, ಸಹಸ್ರಾರು ಇಂಗ್ಲಿಷ್

ಪದಗಳಿಗೆ ಸ್ಪೆಲಿಂಗುಗಳನ್ನು ಉರುಹೊಡೆಯಬೇಕಾದರೂ ಅದು ಅನಿವಾರ್ಯ ಪೀಡೆ ಎಂದು ಅರಿತು ಅವುಗಳನ್ನು ನೆನಪಿನಲ್ಲಿ ಇಡಲು ಅಗತ್ಯವಾದಷ್ಟು ಮಾತ್ರ ಬುದ್ಧಿಯನ್ನು ನೀಡಿ, ತಮ್ಮ ಬುದ್ಧಿಶಕ್ತಿಯ ಬಹುಪಾಲನ್ನು ವಿಷಯ ಗ್ರಹಣೆಗೆ, ಗ್ರಹಿಸಿದ ವಿಚಾರಗಳನ್ನು ಕುರಿತು ಚಿಂತನೆಗಾಗಿ ತೊಡಗಿಸುವ ಪ್ರವೃತ್ತಿಯನ್ನು ಇಲ್ಲೂ ಸಹಜವಾಗಿಯೇ ತೊಡಗಿಸುತ್ತಾರೆ. ಕೇವಲ ಉರುಹೊಡೆಯುವ ಯಂತ್ರಗಳಂತೂ ಆಗಿರುವುದಿಲ್ಲ. ಆಗ ಅವರು ಕಲಿಯುವ ಇಂಗ್ಲಿಷ್ ಸಹ ಹೆಚ್ಚು ಅರ್ಥಪೂರ್ಣವಾಗಿರುತ್ತದೆ.

ಪ್ರಾಥಮಿಕ ಹಂತದಲ್ಲಿನ ಕನ್ನಡ ಅನಂತರ ಇಂಗ್ಲಿಷ್ ಕಲಿತವರೇ ಮುಂದಿನ ತಮ್ಮ ಅಧ್ಯಯನಗಳಲ್ಲಿ, ಅಧ್ಯಾಪನ, ಸಂಶೋಧನೆ, ಹಾಗೂ ಇತರ ಕಾರ್ಯಕ್ಷೇತ್ರಗಳಲ್ಲಿ ಬುದ್ಧಿವಂತರೂ ಪ್ರಸಿದ್ಧರೂ ಆಗಿರುವವರ ಅಸಂಖ್ಯ ಉದಾಹರಣೆಗಳು ನಮ್ಮಲ್ಲಿವೆ. ಈಗಂತೂ ವಿಶ್ವಪ್ರಸಿದ್ಧ ರಾಗಿರುವ ಪ್ರೊ॥ ಸಿ.ಎನ್.ಆರ್. ರಾವ್, ಪ್ರೊ॥ ಯು.ಆರ್. ರಾವ್ ಅವರುಗಳ ಉದಾಹರಣೆ ಗಳಿವೆ. ಹೀಗೆ ರಾಷ್ಟ್ರ, ರಾಜ್ಯಮಟ್ಟದಲ್ಲಿ ಹೆಸರು ಗಳಿಸಿರುವ ಅನೇಕ ಮಹನೀಯರಿದ್ದಾರೆ. ಹಿಂದಿನ ಪೀಳಿಗೆಯ ಶೇಕಡಾ ೯೦ ಮಂದಿಯ ಪ್ರಥಾಮಿಕ ವಿದ್ಯಾಭ್ಯಾಸ ಕನ್ನಡದಲ್ಲೇ ಆಗಿದ್ದು ಅವರಲ್ಲಿ ಲೆಕ್ಕವಿಲ್ಲದಷ್ಟು ಮಂದಿ ಪ್ರಖ್ಯಾತರಾಗಿ ಮೆರೆದಿದ್ದಾರೆ; ಬಹಳಷ್ಟು ಪ್ರಸಿದ್ಧ ಇಂಗ್ಲಿಷ್ ಪ್ರಾಧ್ಯಾಪಕರ ಪ್ರಾಥಮಿಕ ವಿದ್ಯಾಭ್ಯಾಸ ಕನ್ನಡದಲ್ಲೇ ಆಗಿದೆ.

### ಈಗಿನ ಸಮಸ್ಯೆ ಏನು?

ಈ ಯಾವುದೇ ವೈಜ್ಞಾನಿಕ ವಿಚಾರಗಳನ್ನು ಅರಿಯದ, ಅರಿತಿದ್ದರೂ ಸ್ವಾರ್ಥಸಾಧನೆಗಾಗಿ ಬದಿಗೊತ್ತಿರುವ, ಎಲ್ಲವನ್ನೂ ಇಂಗ್ಲಿಷ್‌ಮಯ ಮಾಡಿರುವ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಲಿಯವರು ಈ ಸಂಸ್ಥೆಗಳಲ್ಲಿ ನೀಡುವ ಅತ್ಯಾಕರ್ಷಕ ಹಾಗೂ ಸುಸಜ್ಜಿತ ಶಾಲಾ ವ್ಯವಸ್ಥೆಗಳಿಂದ ಜನರು ಸಹಜವಾಗಿಯೇ ಆಕರ್ಷಿತರಾಗುತ್ತಿದ್ದಾರೆ. ಆದರೆ ಬಹುಪಾಲು ಶಾಲೆಗಳಲ್ಲಿ ಇಂಗ್ಲಿಷ್ ಅನ್ನು ಚೆನ್ನಾಗಿ ಕಲಿಸಲಾರರು. ಏಕೆಂದರೆ ಇದಕ್ಕೆ ಇಂಗ್ಲಿಷ್ ಭಾಷೆಯ ಅವ್ಯವಸ್ಥೆ ಹಾಗೂ ಇಂಗ್ಲಿಷ್ ಸರಿಯಾಗಿಬಾರದ ಉಪಾಧ್ಯಾಯರೇ ಕಾರಣ. ಅನೇಕಬಾರಿ ತಪ್ಪುತಪ್ಪಾಗಿ ಆದರೆ ಪಟಪಟನೆ ಇಂಗ್ಲಿಷ್ ಮಾತಾನಾಡುವ ಮಕ್ಕಳು ಈ ಆಕರ್ಷಣೆಯನ್ನು ಹೆಚ್ಚಿಸುತ್ತಿದ್ದಾರೆ. ಇನ್ನು ಬಹುಪಾಲು ಸರ್ಕಾರಿ ಹಾಗೂ ಖಾಸಗಿ ಶಾಲೆಗಳಲ್ಲಿನ ಅನೇಕ ಅಧ್ಯಾಪಕರಂತೂ ಸರಿಯಾಗಿ ಇಂಗ್ಲಿಷ್ ಪಾಠ ಮಾಡುವುದಿಲ್ಲ. ಎಲ್ಲರೂ ಮಕ್ಕಳ ಮೇಲೆ ಸ್ಪೆಲಿಂಗ್ ಭೂತವನ್ನು ಹೇರಿ ಅದರ ಬಗ್ಗೆ ಮಾತ್ರ ಗಮನವನ್ನು ಕೇಂದ್ರೀಕರಿಸಿ ಮಕ್ಕಳು ಪದಗಳ ಸ್ಪೆಲಿಂಗ್ ಬರೆದೂ ಬರೆದೂ ಇನ್ನೇನನ್ನೂ ಚಿಂತಿಸದಂತೆ ಮಾಡುತ್ತಾರೆ. ಕೆಲವು ಔದ್ಯೋಗಿಕ ಸಂಸ್ಥೆಗಳಿಗೆ ಕೆಲಸಕ್ಕೆಂದು ಸಂದರ್ಶನಕ್ಕೆ ಬರುವ ಅಭ್ಯರ್ಥಿಗಳ ಇಂಗ್ಲಿಷ್ ಮಾತಿನಿಂದ ಮರುಳಾಗಿ ಅವರಲ್ಲಿ ಬುದ್ಧಿವಂತಿಕೆಯ ಮಟ್ಟ ಕಡಿಮೆ ಇದ್ದರೂ ಅದನ್ನು ಗಮನಿಸದೆ ಇತರರನ್ನು ಕಡೆಗಾಣಿಸಿ ಕೆಲಸಕ್ಕೆ ಆಯ್ದುಕೊಳ್ಳುವ ದುರದೃಷ್ಟಕರ ಪದ್ಧತಿಯೂ ಜನರಿಗೆ ಇಂಗ್ಲಿಷ್ ಮರುಳುಮಾಡುತ್ತಿದೆ. ಈ ಪ್ರವೃತ್ತಿಗಳನ್ನು ತಕ್ಷಣದಲ್ಲೇ ಹೋಗಲಾಡಿಸ ಬೇಕಾಗಿದೆ. ಮುಖ್ಯವಾಗಿ ೫ನೆಯ ತರಗತಿಯಿಂದ ಇಂಗ್ಲಿಷ್ ಕಲಿಯುವ ಮಕ್ಕಳಿಗೂ ಇಂಗ್ಲಿಷ್ ಸಂಭಾಷಣಾ ತರಬೇತಿಯನ್ನು ನೀಡುವಂತೆ ಪಠ್ಯಕ್ರಮದಲ್ಲಿ ಸುಧಾರಣೆಯನ್ನು ತರಬೇಕು.

ಹಲವಾರು ವರ್ಷಗಳಿಂದ ಅನೇಕ ಶಾಲಾ ಶಿಕ್ಷಕರೊಡನೆ, ನರ್ಸರಿಯಿಂದಲೇ ಇಂಗ್ಲಿಷ್ ಮೀಡಿಯಂನಲ್ಲಿ ಓದುತ್ತಿರುವ ಮಕ್ಕಳೊಡನೆ ಮಾತನಾಡುತ್ತಾ ಇದ್ದೇನೆ; ಇಂಗ್ಲಿಷ್ ಕಲಿಕೆ ಕುರಿತ ಈ ಚಿಕ್ಕಮಕ್ಕಳ ಚಟುವಟಿಕೆಗಳನ್ನು ಗಮನಿಸುತ್ತಿದ್ದೇನೆ. ದುರದೃಷ್ಟವಶಾತ್ ನ್ಯಾಯವಾದ ತರ್ಕಕ್ಕೆ ಸಿಲುಕದ ಸ್ಪೆಲಿಂಗುಗಳ ಕಲಿಕೆಯತ್ತ ಅವರ ಎಲ್ಲ ಗಮನವೂ ಆಗಿದೆ. ಉದಾಹರಣೆಗೆ, ಚಿಕ್ಕಮಕ್ಕಳು Go(ಇಂಗ್ಲಿಷ್‌ನ ಜಿ ಮತ್ತು ಓ ಸೇರಿದಾಗ ಗೋ), So(ಸೋ), No(ನೋ) ಪದಗಳನ್ನು ಬರೆದು ಉಚ್ಚರಿಸಿ ಅನಂತರ Do(ಡು), To (ಟು) ಪದಗಳ ಉಚ್ಚಾರಣೆಗಳಿಂದ ದಿಕ್ಕುತೋಚದೆ ಬೆಪ್ಪಾಗಿ ತಲೆಯನ್ನು ಗೊಂದಲ ಮಾಡಿಕೊಂಡ ಅನೇಕ ಸಂದರ್ಭಗಳನ್ನು ನೋಡಿದ್ದೇನೆ. Do(ಡು) ಅನ್ನು Door (ಡೋರ್) ಪದದಲ್ಲಿ ಡೋ ಎಂದೂ To(ಟು) ಅನ್ನು (TOTAL) (ಟೋಟಲ್) ಪದದಲ್ಲಿ ಟೋ ಎಂದೂ ಉಚ್ಚರಿಸಿದಾಗ ದಿಗ್ಭ್ರಮೆ ಗೊಂಡಿರುವುದನ್ನೂ ಕಂಡಿದ್ದೇನೆ. ಇಂತಹ ಅನೇಕಾನೇಕ ಚಿತ್ರವಿಚಿತ್ರ ಸ್ಪೆಲಿಂಗುಗಳ ಮತ್ತು ಅವುಗಳ ಉಚ್ಚಾರಣೆ ಆಭಾಸಗಳು ನರ್ಸರಿಯಿಂದಲೂ ಮಕ್ಕಳನ್ನು ಇಂಗ್ಲಿಷ್ ಕಲಿಕೆಯ ಪ್ರತಿ ಹೆಜ್ಜೆಯಲ್ಲೂ ಗೋಳಾಡಿಸುತ್ತಿವೆ. ಇನ್ನು CALF ಮತ್ತು COUGH ಪದಗಳೆರಡನ್ನೂ ಕಾಫ್ ಎಂದು ಉಚ್ಚರಿಸುವಂತೆ, ಹೆಜ್ಜೆ ಹೆಜ್ಜೆಯಲ್ಲೂ ವಿಚಿತ್ರ ಉಚ್ಚಾರಣೆಯ ಪದಗಳು ಎದುರಾಗುತ್ತಿದ್ದು ಮಕ್ಕಳನ್ನು ಕಂಗೆಡಿಸುತ್ತಿವೆ. ಇದರಿಂದಾಗಿ ಇಂಗ್ಲಿಷ್‌ನ ಪ್ರತಿಯೊಂದು ಪದದ ಸ್ಪೆಲಿಂಗ್ ನೆನಪಿನಲ್ಲಿಡುವುದು, ಬರೆದ ಪದದ ಅಕ್ಷರಗಳ ಉಚ್ಚಾರಣೆಗಳಿಗಿಂತ ಬೇರೆಯಾದ ಉಚ್ಚಾರಣೆ ಮಾಡುವುದು ಮುಂತಾದವೇ ವಿದ್ಯಾಭ್ಯಾಸದ ಪ್ರಮುಖ ಅಂಶಗಳಾಗಿ ಈ ವಯಸ್ಸಿನ ಮಕ್ಕಳ ತಲೆಯಲ್ಲಿ ತುಂಬಿಕೊಂಡು ಬುದ್ಧಿಶಕ್ತಿಯ ಇತರ ಅಂಗಗಳು ಕ್ರಿಯಾಹೀನ ವಾಗುತ್ತಿವೆ.

ಆದರೆ ೧೨ ವರ್ಷದೊಳಗಿನ ವಯಸ್ಸಿನಲ್ಲಿ ಕನ್ನಡವನ್ನು ಕಲಿಯುವಾಗ ಬುದ್ಧಿಶಕ್ತಿಯ ಇತರ ಪ್ರಮುಖ ಅಂಗಗಳಿಗೆ ಪ್ರಾಧಾನ್ಯ ನೀಡುವಂತಹ ಶಾಶ್ವತವಾದ ಪ್ರವೃತ್ತಿ ಉಂಟಾಗಿ ಆ ನಂತರ ಮಕ್ಕಳು ಇಂಗ್ಲಿಷ್ ಕಲಿಯುವಾಗ ಬುದ್ಧಿಶಕ್ತಿಯ ಇತರ ಅಂಗಗಳ ಚಟುವಟಿಕೆಗಳಿಗೆ ತೊಂದರೆಯಾಗದಂತೆ ಅಲ್ಲಿನ ಗೊಂದಲಗಳನ್ನು ಅರ್ಥಮಾಡಿಕೊಂಡು ಅವುಗಳೊಡನೆ ಬಾಳುವೆ ಮಾಡಲು ಸಾಧ್ಯವಾಗುತ್ತದೆ; ಇವರುಗಳು ಇಂಗ್ಲಿಷ್‌ನ್ನು ಚೆನ್ನಾಗಿಯೇ ಕಲಿಯುತ್ತಾರೆ ಮತ್ತು ಅವರ ಬುದ್ಧಿವಂತಿಕೆ ಕಡಮೆಯಾಗುವುದಿಲ್ಲ.

ಆದ್ದರಿಂದಲೇ, ಐದನೆಯ ತರಗತಿಯಿಂದ ಇಂಗ್ಲಿಷ್ ಅನ್ನು ಒಂದು ಭಾಷೆಯನ್ನಾಗಿ ಚೆನ್ನಾಗಿ ಕಲಿಸುವ, ಇದಕ್ಕಾಗಿ ಸರಿಯಾದ ಅಧ್ಯಾಪಕರನ್ನು ನೇಮಿಸುವ, ಈಗಿನ ಅಧ್ಯಾಪಕರಿಗೆ ಈ ವಿಚಾರಗಳನ್ನು ಮನದಟ್ಟು ಮಾಡಿಸಿ ಅವರನ್ನು ಸೂಕ್ತ ತರಬೇತಿಗೆ ಒಳಪಡಿಸುವ ಕಾರ್ಯ ಈಗಿಂದೀಗಲೇ ಆಗಬೇಕಿದೆ. ವಿದ್ಯಾ ಇಲಾಖೆಯ ಸರ್ಕಾರಿ ಶಾಲೆಗಳ ಅಧ್ಯಾಪಕರ ಸಭೆಗಳನ್ನು ನಡೆಸಿ ಸರಿಯಾದ ತಿಳಿವಳಿಕೆಯನ್ನು ನೀಡಬೇಕು. ಇದರಿಂದ ಎಂತಹ ಕುಗ್ರಾಮದ ಯಾವ ವರ್ಗದ ವಿದ್ಯಾರ್ಥಿಗಳೇ ಆಗಿರಲಿ ಅವರು ಕನಿಷ್ಠ ೧೨ ವರ್ಷದವರೆಗೆ ಅತ್ಯಂತ ವೈಜ್ಞಾನಿಕ ಭಾಷೆಯಾದ ಕನ್ನಡವನ್ನು ಕಲಿತು ಬುದ್ಧಿಶಕ್ತಿಯನ್ನು ಸರಿಯಾಗಿ ಬೆಳೆಸಿಕೊಂಡು ಅನಂತರ ಇಂಗ್ಲಿಷ್‌ನ್ನು ಚೆನ್ನಾಗಿಯೇ ಕಲಿಯುತ್ತಾರೆ. ಈ ಇಂಗ್ಲಿಷ್ ಕಲಿಕೆಯು ಬಳಕೆಯ ಭಾಷೆಯಾಗಿರಬೇಕು; ಇದರ ಪರಿಣಾಮವಾಗಿ ಕೇವಲ ಮೂರು ನಾಲ್ಕು ವರ್ಷಗಳಲ್ಲೇ

ವಿದ್ಯಾರ್ಥಿಗಳು ಇಂಗ್ಲಿಷ್‌ನಲ್ಲಿ ಮಾತನಾಡುವಂತಾಗುತ್ತದೆ. ಕನ್ನಡದ ಮಾಧ್ಯಮದಲ್ಲಿ ಕಲಿಯುವ ಮಕ್ಕಳಿಗೆ ಇಂಗ್ಲಿಷ್ ಭಯ ಬಿಡಿಸುವುದಷ್ಟೇ ಸದ್ಯದಲ್ಲಿ ಆಗಬೇಕಾದ ಕೆಲಸ. ಕನ್ನಡದ ಜೊತೆಗೆ ಇಂಗ್ಲಿಷ್‌ನ್ನೂ ಚೆನ್ನಾಗಿ ಕಲಿಸಬೇಕಾದುದೇ ಇದಕ್ಕೆ ಸರಿಯಾದ ಮಾರ್ಗ. ಆದ್ದರಿಂದ ಇಂಗ್ಲಿಷ್‌ನ್ನು ಸರಿಯಾಗಿ, ಸಂಭಾಷಣಾ ಭಾಷೆಯಾಗಿ ಕಲಿಸುವಂತೆ ಎಲ್ಲರೂ ತೀವ್ರ ಒತ್ತಡವನ್ನು ತರಬೇಕು. ಇದಕ್ಕಾಗಿ, ಮಕ್ಕಳಿಗೆ ಇಂಗ್ಲಿಷ್ ಕಲಿಸುವಿಕೆಯ ವಿಚಾರದಲ್ಲಿ ಸಕ್ರಿಯವಾಗಿರುವ ಎಲ್ಲ ಸಂಘಟನೆಗಳೂ, ವಿಚಾರವಂತರೂ ದಯವಿಟ್ಟು ಒತ್ತಾಯ ಮಾಡಬೇಕು.

ಈ ವಿಚಾರಗಳನ್ನು ಕುರಿತು ಯೋಚಿಸಲೂ ಇಷ್ಟವಿಲ್ಲದವರು 'ಎಲ್ಲಿ, ಇಂಗ್ಲಿಷ್ ಮಾಧ್ಯಮದ ಶಾಲೆಗಳಷ್ಟು ಚೆನ್ನಾಗಿ ಸಜ್ಜಾಗಿರುವ ಕನ್ನಡ ಮಾಧ್ಯಮದ ಶಾಲೆಗಳನ್ನು ತೋರಿಸಿ', 'ಇಂದಿನ ಶಿಕ್ಷಣ ಪದ್ಧತಿ ಸರಿಯಾಗಿಲ್ಲ. ಪಾಠಗಳ ಹೊರೆ ಜಾಸ್ತಿ. ಪರೀಕ್ಷಾ ವಿಧಾನ ಸರಿ ಇಲ್ಲ' ಮುಂತಾಗಿ ಸವಾಲುಗಳನ್ನು ಎಸೆಯುತ್ತಾರೆ; ಈ ರೀತಿ ನೈಜ ವಿಚಾರದ ದಾರಿ ತಪ್ಪಿಸುವ ಮಾತುಗಳನ್ನು ಆಡುತ್ತಾರೆ.

ಮುಂದೆ ವೈಜ್ಞಾನಿಕ ಮತ್ತು ತಾಂತ್ರಿಕ ವಿಷಯಗಳನ್ನು ಓದಲು ಹಾಗೂ ಅರ್ಥಮಾಡಿ ಕೊಳ್ಳಲು ಇಂಗ್ಲಿಷ್ ಕಲಿಕೆಯು ದಾರಿದೀಪವಾಗಬೇಕು. ಈ ರೀತಿಯ ವ್ಯವಸ್ಥೆಯಿಂದ ಒಂದು ಹಂತದವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿತ ವಿದ್ಯಾರ್ಥಿಗಳು ಮುಂದೆ ಇಂಗ್ಲಿಷ್ ಮಾಧ್ಯಮಕ್ಕೆ ಬದಲಿಸಿಕೊಳ್ಳಬೇಕೆಂದರೆ ಅದು ಸುಲಭ ಸಾಧ್ಯವಾಗುತ್ತದೆ. ಕಲಿಕೆಯಲ್ಲಿ ಸ್ವಂತಿಕೆಯನ್ನು ಬೆಳೆಸಿಕೊಂಡ, ವಿಷಯಗಳನ್ನು ಅರ್ಥಮಾಡಿಕೊಳ್ಳುವ ಶಕ್ತಿಯನ್ನು ಪಡೆದುಕೊಂಡ ವಿದ್ಯಾರ್ಥಿಗಳು ಈ ಬದಲಾವಣೆಯಲ್ಲಿ ಯಾವ ತೊಡಕನ್ನೂ ಕಾಣಲಾರರು. ಇದು ನಾನು ಮತ್ತು ನನ್ನ ಅನೇಕಾನೇಕಮಿತ್ರರ ಮತ್ತು ನಮ್ಮ ಮಕ್ಕಳ ಅನುಭವ. ಇದೇ ಇಂದಿನ ಮಕ್ಕಳಿಗೆ ಅಗತ್ಯವಾದ ಸರಿಯಾದ ಶಿಕ್ಷಣ ವ್ಯವಸ್ಥೆ.

ಶಿಕ್ಷಣದಲ್ಲಿ ಮಾಧ್ಯಮವನ್ನು ಬದಲಿಸಿಕೊಳ್ಳಬೇಕೆಂದರೆ, ಆ ಬದಲಾವಣೆಯ ಹಂತವನ್ನು ಗುರುತಿಸುವುದು ಮತ್ತೊಂದು ಬಹು ಮುಖ್ಯ ಜವಾಬ್ದಾರಿ. ಇದು ಏಳನೇ ತರಗತಿಯಾಗಿರ ಬಹುದು. ಎಸ್.ಎಸ್.ಎಲ್.ಸಿ. / ಪಿಯುಸಿ / ಪದವಿ ಶಿಕ್ಷಣ–ಹೀಗೆ ಯಾವುದೇ ಆಗಬಹುದು. ಒಂದು ಭಾಷೆಯನ್ನಾಗಿ ಇಂಗ್ಲಿಷ್‌ನ್ನು ಚೆನ್ನಾಗಿ ಕಲಿತ ವಿದ್ಯಾರ್ಥಿಗಳಿಗೆ ಯಾವುದೇ ಹಂತ ವಾದರೂ ಸಮಸ್ಯೆಯೇ ಅಲ್ಲ. ಆದರೆ ಸಾಮಾನ್ಯ ನಿಯಮದ ದೃಷ್ಟಿಯಿಂದ ಒಂದು ಹಂತವನ್ನು ಗುರುತಿಸಲೇಬೇಕಾಗುತ್ತದೆ. ಈಗಿನ ಜನಾಭಿಪ್ರಾಯಗಳು ಮತ್ತು ವಾಸ್ತವ ಸ್ಥಿತಿಗಳನ್ನು ಗಮನಿಸಿ ಕರ್ನಾಟಕದಲ್ಲಿ ಎಸ್.ಎಸ್.ಎಲ್.ಸಿ. ಅಥವಾ ಕನಿಷ್ಠ ೭ನೆಯ ತರಗತಿಯವರೆಗಾದರೂ ಕಡ್ಡಾಯವಾಗಿ ಕನ್ನಡ ಮಾಧ್ಯಮವನ್ನು ನಿಗದಿಗೊಳಿಸಬೇಕು. ಶಾಲೆಗಳು ಇಂತಹ ವೈಜ್ಞಾನಿಕ ವಾದ ವಿಚಾರಗಳನ್ನು ಒಪ್ಪಿ ತಮ್ಮ ಶಾಲೆಗಳಲ್ಲಿ ಕನ್ನಡಕ್ಕೆ ಮುಕ್ತ ಅವಕಾಶವನ್ನು ನೀಡಬೇಕು. ಜೊತೆಗೆ ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಹೇಳಿಕೊಡಬೇಕು.

೨೦೦೩ನೇ ಇಸವಿಯಲ್ಲಿ ನಡೆದ ಘಟನೆಯೊಂದು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಕರ್ನಾಟಕ ಸರ್ಕಾರದ ಒಬ್ಬ ಅಧಿಕಾರಿಯೊಡನೆ ನಾನು ಮತ್ತು ಮಿತ್ರ ಶ್ರೀ ಜಿ.ಎನ್. ನರಸಿಂಹಮೂರ್ತಿ ಕಾರಿನಲ್ಲಿ ಹೋಗುತ್ತಿದ್ದೆವು; ಅವರೊಡನೆ ನಾವು ಕನ್ನಡ ತಂತ್ರಾಂಶಗಳನ್ನು

ಕುರಿತು ಹಲವಾರು ವಿಚಾರಗಳನ್ನು ಮಾತನಾಡುತ್ತಾ ಇದ್ದೆವು. ಕಾರಿನಲ್ಲಿ ಒಬ್ಬ ಅಮೆರಿಕನ್ (ಯುಎನ್‌ಡಿಪಿ ಅಧಿಕಾರಿ) ಸಹ ಕುಳಿತಿದ್ದರು. ಮಾತುಕತೆಯಲ್ಲಿ ಕನ್ನಡದೊಡನೆ ಇಂಗ್ಲಿಷ್‌ನ್ನು ಧಾರಾಳವಾಗಿ ಬೆರೆಸಿದ್ದೆವು. ನಮ್ಮ ಮಾತುಕತೆಗಳನ್ನು ಗಮನಿಸಿದ್ದ ಆತ 'Why do you Englishize your language I say? Why do you unnecessarily mix English in Your language? Your language is so good scientific and better than English' ಎಂದು ಹೇಳಿ ನಮ್ಮನ್ನು ಅಚ್ಚರಿಗೊಳಿಸಿದರು.

ಬೆಂಗಳೂರಿನಲ್ಲಿ (೧೯೮೭) ಆಯೋಜಿಸಲಾಗಿದ್ದ 'ಕಂಪ್ಯೂಟರ್ ಮತ್ತು ಸಂಸ್ಕೃತ' ವಿಚಾರವನ್ನು ಕುರಿತ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ Artificlal Intelligence ಎಂಬ ಅಂತಾರಾಷ್ಟ್ರೀಯ ವೈಜ್ಞಾನಿಕ ಪತ್ರಿಕೆಯ ಸಂಪಾದಕರಾಗಿದ್ದು ಅಂತಾರಾಷ್ಟ್ರೀಯ ಮಾನ್ಯತೆಗಳಿಸಿದ್ದ ಪ್ರೊ, ರಿಕ್ ಬ್ರಿಗ್ಸ್ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. Artificial Intelligence ಪತ್ರಿಕೆಯ ಲೇಖನವೊಂದರಲ್ಲಿ 'Sanskrit is the best language for computers. This is because it is the most scientific, structured, unambiguous and context independent language. Whereas English is most unscientific, unstructured, ambigious and context dependent language' ಎಂಬ ವಿಚಾರಗಳನ್ನು ಮಂಡಿಸಿದ್ದರು. ಅದನ್ನು ಗಮನಿಸಿಯೇ ಈ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಆಗ ಕೇಂದ್ರ ಸರ್ಕಾರದ ಎಲೆಕ್ಟ್ರಾನಿಕ್ಸ್ ಇಲಾಖೆಯ ಕಾರ್ಯದರ್ಶಿಗಳಾಗಿದ್ದ ಪದ್ಮಭೂಷಣ ಡಾ॥ ಎನ್ ಶೇಷಗಿರಿ, ಪ್ರೊ॥ ರೊದ್ದಂ ನರಸಿಂಹ ಮುಂತಾದವರೇ ಅಲ್ಲದೆ ರಾಷ್ಟ್ರದ ಅನೇಕ ಸಂಸ್ಕೃತ ವಿದ್ವಾಂಸರು ಹಾಗೂ ಅನೇಕ ಪ್ರಮುಖ ಗಣಕ ವಿಜ್ಞಾನಿಗಳು ಹಾಗೂ ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್ ಮುಂತಾದ ದೇಶಗಳಿಂದ ಆಗಮಿಸಿದ್ದ ಗಣಕ ವಿಜ್ಞಾನಿಗಳು ಭಾಗವಹಿಸಿದ್ದರು. ಮದರಾಸು ಐಐಟಿಯಲ್ಲಿ ಹತ್ತಾರು ವರ್ಷಗಳ ಕಾಲ ಪ್ರಾಧ್ಯಾಪಕರಾಗಿದ್ದು ೧೯೮೪ರಲ್ಲಿ ಸನ್ಯಾಸ ಸ್ವೀಕರಿಸಿದ ಶ್ರೀ ಶ್ರೀ ಪರಮಾನಂದಭಾರತೀ ಸ್ವಾಮಿಗಳು ಈ ಸಮ್ಮೇಳನಕ್ಕೆ ಕಾರಣವಾಗಿ ಇದರ ಕೇಂದ್ರಬಿಂದುವಾಗಿದ್ದರು. ಈ ಸಮ್ಮೇಳನದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವ ಸೌಭಾಗ್ಯ ನನ್ನದಾಗಿತ್ತು. ಸಂಸ್ಕೃತ ಮತ್ತು ಭಾರತೀಯ ಭಾಷೆಗಳ ವೈಜ್ಞಾನಿಕತೆ, ಧ್ವನ್ಯಾತ್ಮಕತೆ ಮುಂತಾದವನ್ನು ಪ್ರೊ, ರಿಕ್ ಬ್ರಿಗ್ಸ್ ಅವರು ಮುಕ್ತಕಂಠದಿಂದ ಹೊಗಳಿದ್ದಲ್ಲದೆ 'ಮುಂದಿನ ಜನ್ಮ ಎಂಬುದಿದ್ದರೆ, ಆ ಜನ್ಮದಲ್ಲಿ ನಾನು ಭಾರತೀಯನಾಗಿಯೇ ಹುಟ್ಟಬೇಕು. ನನ್ನ ಮಾತೃಭಾಷೆ ಭಾರತೀಯ ಭಾಷೆಗಳಲ್ಲಿ ಒಂದಾಗಿರಬೇಕು. ಇದೇ ನನ್ನ ಆಸೆ' ಎಂದು ನಮಗೆ ಸ್ಪಷ್ಟವಾಗಿ ತಿಳಿಸಿದ್ದರು. ಅಲ್ಲದೆ ಇಂಗ್ಲಿಷ್ ಮಾತೃಭಾಷೆಯ ವಿದ್ಯಾರ್ಥಿಗಳ ಪೈಕಿ ಶೇಕಡಾ ೮೦ರಷ್ಟು ಮಂದಿಯ ಬುದ್ಧಿಶಕ್ತಿಯ ಮಟ್ಟವು ಸಂಸ್ಕೃತ ಅಥವಾ ಅದೇ ಸಂರಚನೆ ಉಳ್ಳ ಭಾರತೀಯ ಭಾಷೆಗಳನ್ನು ಮಾತೃಭಾಷೆಯಾಗಿರುವವರಿಗಿಂತ ಕಡಿಮೆಯಾಗಿರುತ್ತವೆ ಎಂದು ಅವರು ನನಗೆ ಸ್ಪಷ್ಟವಾಗಿ ಹೇಳಿದ್ದರು.

ಈ ಲೇಖನದ ಮೊದಲಲ್ಲೇ ತಿಳಿಸಿರುವಂತೆ ಕಾನ್ಪುರ ಐಐಟಿಯಲ್ಲಿ ಸೇರಿದ್ದ ಪ್ರೊಫೆಸರುಗಳು 'ಅಮೇರಿಕಾದಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡಿ ಡಾಕ್ಟರೇಟ್ ಪಡೆದಿರುವವರನ್ನು ಅವರು ಭಾರತೀಯರೇ ಆಗಿದ್ದರೂ ಐಐಟಿಗಳಿಗೆ ಕೆಲಸಕ್ಕಾಗಲೀ ಉನ್ನತ ಸಂಶೋಧನಾ ಕೆಲಸಗಳಿಗಾಗಲಿ

ತೆಗೆದುಕೊಳ್ಳಲಾಗದು. ಏಕೆಂದರೆ, ಇಂತಹ ಡಾಕ್ಟರೇಟ್ ಪರಿಣತರು ತಮ್ಮ ಅಧ್ಯಯನಕ್ಕೆ ಮಾತ್ರ ಸಂಬಂಧಿಸಿದಂತೆ ಕೇವಲ ಒಂದೆರಡು ಅಂಶಗಳನ್ನು ಕುರಿತು ಹೆಚ್ಚಿನ ಅಧ್ಯಯನ ಮಾಡಿರುತ್ತಾರೆ. ಆದರೆ ವಿಷಯದ ವ್ಯಾಪ್ತಿ, ಬಳಕೆ ಹಾಗೂ ವೈಶಾಲ್ಯಗಳ ಅರಿವೇ ಪಡೆದಿರುವುದಿಲ್ಲ. ನಮ್ಮ ದೇಶದಲ್ಲಾದರೋ ವಿಜ್ಞಾನ, ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡುವವರು ತಾವು ಆಯ್ದ ವಿಷಯದ ಸಹ ವಿಷಯಗಳನ್ನೂ ಸಾಕಷ್ಟು ಅರಿತಿರುತ್ತಾರೆ. ಇಂತಹ ಪ್ರವೃತ್ತಿಯೇ ಸಂಶೋಧನೆ, ಸ್ವತಂತ್ರ ವಿಚಾರಗಳಿಗೆ ಅತ್ಯಗತ್ಯ. ಆದ್ದರಿಂದಲೇ ಕಡಮೆ ಜನಬಲ ಹಾಗೂ ಧನಬಲಗಳಿದ್ದರೂ ಇಲ್ಲಿನ ಸಂಶೋಧನೆ, ಅಭಿವೃದ್ಧಿ ಹಾಗೂ ತಯಾರಿಕೆಗಳಲ್ಲಿ ತೊಡಗಿರುವ ವಿವಿಧ ರೀತಿಯ ಸಂಸ್ಥೆಗಳ ಗುಣಮಟ್ಟ ಹಾಗೂ ಕಾರ್ಯವ್ಯಾಪ್ತಿಗಳು ಜಾಸ್ತಿ ಯಾಗಿರುತ್ತವೆ. ಇದಕ್ಕೆಲ್ಲಾ ಆರಂಭದ ವಿದ್ಯಾಭ್ಯಾಸ ಭಾರತೀಯ ಭಾಷೆಗಳಲ್ಲಿ ಆಗಿರುವುದೇ ಕಾರಣ' ಎಂಬ ಅಭಿಪ್ರಾಯಗಳನ್ನು ಎಲ್ಲರೂ ಒಮ್ಮತದಿಂದ ವ್ಯಕ್ತಪಡಿಸಿದರು.

ಈಗ ಸಾಮಾನ್ಯವಾಗಿ ಅನೇಕ ಪ್ರೌಢಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯವಿದೆ. ಆದರೆ ಇಂಗ್ಲಿಷ್ ಮಾಧ್ಯಮವಿದ್ದರೂ ವಿಷಯಗಳನ್ನು ಕನ್ನಡದಲ್ಲೂ ವಿವರಿಸುವ ಗ್ರಾಮಾಂತರ ಶಾಲೆಗಳನ್ನು ಗಮನಿಸಿ. ಅಲ್ಲಿನ ವಿದ್ಯಾರ್ಥಿಗಳು, ಕೇವಲ ಇಂಗ್ಲಿಷ್ ಮಾತ್ರ ಬಳಸುವ/ಕನ್ನಡದಲ್ಲಿ ಮಾತಾನಾಡಿದರೆ ಶಿಕ್ಷಿಸುವ ಶಾಲೆಗಳ ಅನೇಕ ಮಕ್ಕಳಿಗಿಂತ ವಿಷಯಗಳ ಗ್ರಹಿಕೆ ಮತ್ತು ಅಂಕ ಗಳಿಕೆಯಲ್ಲಿ ಮುಂದಿರುತ್ತಾರೆ. ಏಕೆಂದರೆ 'ಇಂಗ್ಲಿಷ್ ಮಾತ್ರ' ವಿದ್ಯಾರ್ಥಿಗಳ ಪೈಕಿ ಬಹುಪಾಲು ಮುಂದಿಯದು ಪಾಠಗಳನ್ನು ಉರುಹೊಡೆಯುವ ಪ್ರವೃತ್ತಿ; ತರಗತಿಯಲ್ಲಿ ವಿಷಯಗಳ ಠೇಂಕಾರ; ತಮ್ಮ ಗ್ರಹಿಕೆಯ ಕಡೆ ಗಮನವಿಡದ ಚಾಳಿ; ಇಂಗ್ಲಿಷ್‌ನಲ್ಲಿ ಅನೇಕ ವೇಳೆ ತಪ್ಪಾಗಿ, ಆದರೆ ಅರಳು ಹುರಿದಂತೆ ಮಾತನಾಡುವ ಠೇಕಾಂರ; ತಮ್ಮ ಗ್ರಹಿಕೆಯ ಪ್ರಮಾಣ ಹೆಚ್ಚು ಎಂಬ ಹುಸಿ ಗರ್ವ. ಅದರೆ ಪಿಯುಸಿ ಅಂತಿಮ ಪರೀಕ್ಷೆಯಲ್ಲಿ, ಮೊದಲಿ ಗಿಂತಲೂ ಮಾತೃಭಾಷೆಯನ್ನು ದೂರವಿಟ್ಟ ಈ ವಿದ್ಯಾರ್ಥಿಗಳಿಗಿಂತ ಇತರರು ಹೆಚ್ಚಿನ ಅಂಕಗಳನ್ನು ಗಳಿಸುತ್ತಾರೆ. ಇದೇ ಅನೇಕ ಶಿಕ್ಷಣ ಸಂಸ್ಥೆಗಳ ಅನುಭವವಾಗಿದೆ. ಆದ್ದರಿಂದಲೇ, 'ಆರಂಭದ ಹಂತಗಳಲ್ಲಿ ಕನ್ನಡ ಮಾಧ್ಯಮದಲ್ಲೇ ವಿದ್ಯಾಭ್ಯಾಸವಿರಬೇಕು' ಎಂಬುದೇ ಪ್ರಮಾಣಿಕ ವಾಗಿ ಚಿಂತಿಸುವ ಶಿಕ್ಷಣ ಸಂಸ್ಥೆಗಳ ಅಭಿಪ್ರಾಯ.

ಕಳೆದ ಮೂರುವರ್ಷಗಳ ಹಿಂದಿನ ಮಾತು. ಬೆಂಗಳೂರಿನ ಒಂದು ಪ್ರತಿಷ್ಠಿತ ಪದವಿಪೂರ್ವ ಕಾಲೇಜಿನ ನನ್ನ ಒಬ್ಬ ಸಹೋದ್ಯೋಗಿಯವರೊಂದಿಗೆ ಹೋದೆ. ನನ್ನ ಸಹೋದ್ಯೋಗಿಯವರು ತಮ್ಮ ಮಗಳನ್ನು ಆ ಕಾಲೇಜಿಗೇ ಸೇರಿಸಬೇಕೆಂಬ ತವಕದಲ್ಲಿದ್ದರು. ನಮ್ಮನ್ನು ವಿಶ್ವಾಸದಿಂದಲೇ ಬರಮಾಡಿಕೊಂಡ ಪ್ರಾಂಶುಪಾಲರು ಬಾಲಕಿಯ ವಿದ್ಯಾಭ್ಯಾಸದ ವಿವರಗಳನ್ನು ಕೇಳಿದರು.

'ನನ್ನ ಮಗಳು ಐಸಿಎಸ್‌ಇ ಪಠ್ಯಕ್ರಮದಲ್ಲಿ ಓದಿದ್ದಾಳೆ; ಶೇಕಡಾ ೮೮ ಅಂಕಗಳನ್ನು ಗಳಿಸಿದ್ದಾಳೆ' ಎಂದು ಹೆಮ್ಮೆಯಿಂದಲೆ ನನ್ನ ಸಹೋದ್ಯೋಗಿಯು ಉತ್ತರಿಸಿದ ಕೂಡಲೇ ಸಿಬಿಎಸ್‌ಇ, ಐಸಿಎಸ್‌ಇ ಪಠ್ಯಕ್ರಮದಲ್ಲಿ ಓದಿದ ವಿದ್ಯಾರ್ಥಿಗಳನ್ನೂ, ಕೇವಲ ಇಂಗ್ಲಿಷ್ ಶಾಲೆಗಳಲ್ಲಿ ಓದಿದವರನ್ನೂ ಸೇರಿಸಿಕೊಳ್ಳಲು ನಮಗೆ ಇಷ್ಟವಿಲ್ಲ. ದಯವಿಟ್ಟು ಕ್ಷಮಿಸಿ' ಎಂದು

ಪ್ರಾಂಶುಪಾಲರು ನಿಷ್ಠುರವಾಗಿ ಹೇಳಿಬಿಟ್ಟರು. ದಿಗ್ಭ್ರಾಂತರಾದ ನಮಗೆ ದೊರೆತ ಉತ್ತರಗಳು ಶಿಕ್ಷಣ ಮಾಧ್ಯಮದ ನಿಜ ಸ್ವರೂಪಕ್ಕೆ ಹಿಡಿದ ಕನ್ನಡಿ.

ಆದರೆ ಈಗಿನ ಪರಿಸ್ಥಿತಿ ಏನು? ತಂದೆತಾಯಿಗಳು ಇಂಗ್ಲಿಷ್ ಹುಚ್ಚಿನಲ್ಲಿ, ಇಂಗ್ಲಿಷ್ ಇಲ್ಲದೆ ಗತ್ಯಂತರವಿಲ್ಲ ಎಂಬ ಆಲೋಚನೆಯಲ್ಲಿ ಭ್ರಮೆಹಿಡಿದವರಂತೆ ನರ್ಸರಿಯಿಂದ ಹಿಡಿದು ಎಲ್ಲ ತರಗತಿಗಳೂ ಇಂಗ್ಲಿಷ್ ಮಾಧ್ಯಮವಿರುವ ಶಾಲೆಗಳಿಗೆ ತಮ್ಮ ಮಕ್ಕಳನ್ನು ದೂಡುತ್ತಿದ್ದಾರೆ; ಇದಕ್ಕಾಗಿ ಎಷ್ಟೇ ಹಣ ಖರ್ಚಾದರೂ ಸರಿ, ಶಾಲೆ ಎಷ್ಟೇ ದೂರದಲ್ಲಿದ್ದರೂ ಸರಿ, ಇಂತಹ ಶಾಲೆಗಳಲ್ಲಾದರೋ ಮಕ್ಕಳು ತಮ್ಮ ಮಾತೃಭಾಷೆಯಲ್ಲಿ ಮಾತನಾಡುವಂತಿಲ್ಲ; ಮಾತನಾಡಿದರೆ ಬಯ್ಗಳು, ಹೊಡೆತ, ದಂಡ ಇತ್ಯಾದಿ ಶಿಕ್ಷೆ. ಕೇವಲ ಇಂಗ್ಲಿಷ್‌ನಲ್ಲಿ ಮಾತನಾಡುವುದರಿಂದ ಪಾಠಗಳಲ್ಲಿನ ವಿಷಯಗಳು ಅರ್ಥವಾಗುತ್ತವೆಯೇ? ಈ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮವಿದ್ದರೂ ಪಾಠಗಳನ್ನು ಕನ್ನಡದಲ್ಲಿ ಏಕೆ ವಿವರಿಸಬಾರದು? ಹೀಗೆ ಮಾಡುವುದು ದೇಶದ್ರೋಹವೇ? ಅವಮಾನವೇ? ಸಂಕೋಚವೇ? ಘನತೆಗೆ ಕಮ್ಮಿಯೇ? ಮಕ್ಕಳಿಗೆ ವಿಷಯ ಗಳನ್ನು ತಿಳಿಸಲು ಯಾವ ಭಾಷೆಯಾದರೇನು? ಚಿಕ್ಕಂದಿನಲ್ಲೇ ಮಕ್ಕಳನ್ನು ಇಂಗ್ಲಿಷ್ ಸ್ಪೆಲಿಂಗುಗಳ ಭಯೋತ್ಪಾದಕ ಲೋಕದಲ್ಲಿ ಬಿಟ್ಟು ಅವರು ಪಾಠದ ತಿರುಳನ್ನು ಅರಿಯಲು ಯಾವುದೇ ಆಸಕ್ತಿ, ಉತ್ಸಾಹಗಳನ್ನು ತೋರದಂತಹ ಪರಿಸ್ಥಿತಿ ಉಂಟುಮಾಡುವ ವಿದ್ಯಾಭ್ಯಾಸ ಪದ್ಧತಿಯನ್ನು ಯಾರು ಇವರಿಗೆ ಹೇಳಿಕೊಟ್ಟರು?

ಇಂತಹ ತೀರ ಅವೈಜ್ಞಾನಿಕ ಪದ್ಧತಿಯನ್ನು ಏಕೆ ಅನುಸರಿಸುತ್ತಿದ್ದೀರಿ ಎಂದು ಪ್ರತಿಷ್ಠಿತ ಶಾಲೆಯೊಂದರ ಮುಖ್ಯೋಪಾಧ್ಯಾಯಿನಿಯನ್ನು ಪ್ರಶ್ನಿಸಿದಾಗ ಅವರು 'ಇಲ್ಲ, ಸ್ಪೆಲಿಂಗ್ ಇಲ್ಲದೆ ಧ್ವನ್ಯಾತ್ಮಕ ವಿಧಾನದಲ್ಲಿ ಮಕ್ಕಳಿಗೆ ಇಂಗ್ಲಿಷ್ ಹೇಳಿಕೊಡುತ್ತೇವೆ' ಎಂಬ ಹಾಸ್ಯಾಸ್ಪದ ಉತ್ತರವನ್ನು ಕೊಟ್ಟರು. ಧ್ವನ್ಯಾತ್ಮಕತೆ ಎಂದರೆ ಏನು? ಇಂಗ್ಲಿಷ್ ಭಾಷೆಯು ಧ್ವನ್ಯಾತ್ಮಕವೇ? Cough ಅಥವಾ Calf ಪದಗಳನ್ನು ಮಕ್ಕಳು Kaf ಎಂದು ಬರೆದರೆ, ಉಚ್ಚಾರಣೆ ದೃಷ್ಟಿಯಿಂದ Radius ಪದವನ್ನು Redias ಎಂದು ಬರೆದರೆ ನೀವು ಒಪ್ಪುತ್ತೀರಾ? ಎಂದೆಲ್ಲಾ ಪ್ರಶ್ನೆಗಳನ್ನು ಕೇಳಬೇಕಾಯಿತು. ಅವರು ಸಹಜವಾಗಿಯೇ ನಿರುತ್ತರರಾಗಬೇಕಾಯಿತು. ಆದರೂ ತಮ್ಮ ಪಟ್ಟನ್ನು ಬಿಡಲೊಲ್ಲದ ಅವರು 'ಕನ್ನಡದಲ್ಲಿ ಮಾತನಾಡಿಸಿದರೆ ತಂದೆತಾಯಿಗಳು ಆಕ್ಷೇಪಿಸುತ್ತಾರೆ' ಎಂದು ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳಲು ಪ್ರಯತ್ನಿಸಿದರು. ಈ ವಿಚಾರದಲ್ಲಿ ಯಾರೇ ಪೋಷಕರನ್ನು ವಿಚಾರಿಸಿದಾಗ ಅವರು ಇಂಗ್ಲಿಷ್ ಮಾಧ್ಯಮದಿಂದ ತಮ್ಮ ಮಕ್ಕಳಿಗೆ ತೊಂದರೆ ಎಂದು ಒಪ್ಪಿಕೊಂಡರೂ 'ನಾವೇನು ಮಾಡುವುದು? ಶಾಲೆಯೇ ಹಾಗಿದೆ, ಶಾಲೆಯವರದೇ ತಪ್ಪು; ಈ ಶಾಲೆಯಲ್ಲಿ ಪ್ರವೇಶ ದೊರಕಿಸುವುದೇ ನಮ್ಮ ಪುಣ್ಯ' ಎಂದು ಹೇಳಿ ತಮ್ಮ ಕೈ ತೊಳೆದುಕೊಳ್ಳುತ್ತಾರೆ. ವಿದ್ಯಾಭ್ಯಾಸ ಇಲಾಖೆಯವರು 'ನಾವೇನು ಮಾಡೋಣ? ಶಾಲೆಗಳ ಆಡಳಿತ ಮಂಡಲಿಯವರು ಮತ್ತು ತಂದೆ ತಾಯಿಗಳು ಒಂದಾಗಿರುವಾಗ ನಮ್ಮ ಅಭಿಪ್ರಾಯವನ್ನು ಹೇರಲು ಸಾಧ್ಯವಿಲ್ಲ' ಎಂದು ಹೇಳಿಯಾರು. ಕನ್ನಡ ಮಾಧ್ಯಮ ಎಂದು ಮುಚ್ಚಳಿಕೆ ಬರೆದುಕೊಟ್ಟು ರಾಜಾರೋಷವಾಗಿ ಕನ್ನಡ ದ್ರೋಹಿ, ಕನ್ನಡ ವಿರೋಧಿ, ಎಲ್ಲಕಿಂತ ಮಿಗಿಲಾಗಿ ಬಹುಮಂದಿ ಮಕ್ಕಳ ಬೌದ್ಧಿಕ ಮಟ್ಟ ಕುಸಿಯಲು ಕಾರಣವಾಗಿರುವ ಅನೇಕ

ಇಂಗ್ಲಿಷ್ ಶಾಲೆಗಳನ್ನು ಅನಧಿಕೃತ ಶಾಲೆಗಳೆಂದು ಕರೆದು ಪತ್ರಿಕೆಯಲ್ಲಿ ಪ್ರಕಟನೆಗಳೇನೋ ಬರುತ್ತವೆ. ಆದರೆ ಈ ಶಾಲೆಗಳು ಎಂದಿನಂತೆ ತಮ್ಮ ವ್ಯಾಪಾರಿ ದಂಧೆಯನ್ನು ಮುಂದು ವರೆಸಿಕೊಂಡು ಹೋಗುತ್ತವೆ.

ಇತ್ತೀಚೆಗೆ ಇಂಗ್ಲಿಷ್ ಮಾಧ್ಯಮದ ಹುಚ್ಚು, ಕಿಚ್ಚುಗಳು ಗ್ರಾಮಾಂತರ ಪ್ರದೇಶಗಳಲ್ಲೂ ಅತಿವೇಗದಿಂದ ವ್ಯಾಪಿಸಿಕೊಳ್ಳುತ್ತಿವೆ. ಆದರೆ ಅದೃಷ್ಟವಶಾತ್ ಅಲ್ಲಿನ ಬಹಳಷ್ಟು ಅಧ್ಯಾಪಕರು ಶಾಲೆಗಳಲ್ಲಿ (ಇಂಗ್ಲಿಷ್ ಮಾಧ್ಯಮವಾದರೂ) ವಿಷಯಗಳನ್ನು ಕನ್ನಡದಲ್ಲೂ ವಿವರಿಸುತ್ತಿದ್ದಾರೆ. ಆದ್ದರಿಂದಲೇ ಗ್ರಾಮೀಣ ವಿದ್ಯಾರ್ಥಿಗಳು ಪರೀಕ್ಷಾ ಫಲಿತಾಂಶದಲ್ಲಿ ಮೇಲುಗೈ ಪಡೆದಿರುವುದು ಎನ್ನಬಹುದು. ಆದರೆ ಈ ಬಗ್ಗೆ ನಗರ ಪ್ರದೇಶದವರು ಹೆಚ್ಚಿನ ಕಾಲ ಕರುಬುವಂತಿಲ್ಲ. ಏಕೆಂದರೆ ಇಂಗ್ಲಿಷ್ ಹುಚ್ಚಿನ ಕಿಚ್ಚು ವೇಗವಾಗಿ ಹರಡುತ್ತಿದ್ದು ಗ್ರಾಮೀಣ ಪ್ರದೇಶದ ಮಕ್ಕಳೂ ನಗರ ಪ್ರದೇಶದ ಮಕ್ಕಳಂತೆ ನಿಜವಾದ ಅರ್ಥದಲ್ಲಿ ದಡ್ಡರಾಗುವ ದಿನಗಳು ಹತ್ತಿರ ಬರುತ್ತಿವೆ.

ಒಟ್ಟಿನಲ್ಲಿ, ಇಂಗ್ಲಿಷ್ ಬೇಕೇ ಬೇಕು. ಆದರೆ ಆ ಭಾಷೆಯ ಅವ್ಯವಸ್ಥೆಯ ಹನ್ನೆರಡು ವರ್ಷಗಳೊಳಗಿನ ಬುದ್ಧಿಶಕ್ತಿ ಹಾಗೂ ಚಿಂತನೆಗಳಿಗೆ ಹಾನಿಯನ್ನುಂಟುಮಾಡುತ್ತವೆ, ಆದ್ದರಿಂದಲೇ ಕನಿಷ್ಠ ಐದನೆಯ ತರಗತಿಯವರೆಗೆ ಕನ್ನಡದಲ್ಲೇ ವಿದ್ಯಾಭ್ಯಾಸ ಮಾಡಿಸಿ ಮಕ್ಕಳ ಮನಸ್ಸನ್ನು ಅರಳಿಸಿ ಅನಂತರ ಇಂಗ್ಲಿಷ್‌ನ್ನು ಚೆನ್ನಾಗಿ ಕಲಿಸಬೇಕು. ಇದು ಕುಗ್ರಾಮಗಳಾದಿಯಾಗಿ ಎಲ್ಲಾ ಕಡೆಯ ಎಲ್ಲಾ ಶಾಲೆಗಳಲ್ಲೂ ಸರಿಯಾಗಿ ಜಾರಿಗೆ ಬರಬೇಕು. ಎಲ್ಲರೂ ಒಂದಾಗಿ ಇದರ ಕಡೆ ಗಮನ ಹರಿಸಬೇಕು. ಆಗಲೇ ನಮ್ಮ ಮಕ್ಕಳು ಎಲ್ಲಾ ವಿದ್ಯಾ ಕ್ಷೇತ್ರಗಳಲ್ಲೂ ಪ್ರತಿಭಾವಂತರಾಗಿ ತಂದೆ ತಾಯಿ ಹಾಗೂ ಪೋಷಕರನ್ನು ತೃಪ್ತಿಪಡಿಸಿ ರಾಜ್ಯಕ್ಕೆ ಹೆಸರು ತರುತ್ತಾರೆ.

**ಇಷ್ಟಾದರೂ, ಕನ್ನಡದ ಬಳಕೆಗೆ ವಿರೋಧ ಹೇಗಾಗುತ್ತಿದೆ? ಕನ್ನಡಿಗರನ್ನು ಇಂಗ್ಲಿಷ್ ಗುಮ್ಮನಿಂದ ಬೆದರಿಸುತ್ತಿರುವವರು ಯಾರು?**

ಶಿಕ್ಷಣ ಮಾಧ್ಯಮವನ್ನು ಕುರಿತು ಪ್ರೊ. ಚಂದ್ರಶೇಖರ ಪಾಟೀಲ ಮತ್ತು ಪ್ರೊ. ಬರಗೂರು ರಾಮಚಂದ್ರಪ್ಪ ಅವರು ಸರಕಾರಕ್ಕೆ ಸಲ್ಲಿಸಿದ ಅತ್ಯಂತ ವೈಜ್ಞಾನಿಕ ವರದಿಗಳನ್ನು ನೋಡಿ. ಈ ಮಹನೀಯರ ನೇತೃತ್ವದಲ್ಲಿ ಚಿಂತನಶೀಲ, ಅನುಭವಿ ವ್ಯಕ್ತಿಗಳ ಶಿಕ್ಷಣ ಮಾಧ್ಯಮ ಕುರಿತು ಎಲ್ಲ ವಿಚಾರಗಳನ್ನೂ ಪರಿಶೀಲಿಸಿ. ಪರಾಮರ್ಶಿಸಿ ಸಿದ್ಧಪಡಿಸಿದ ಈ ವರದಿಗಳನ್ನು ಓದಿದ ಹಲವರು 'ಏಳನೆಯ ತರಗತಿಯವರೆಗೆ ಕನ್ನಡ ಮಾಧ್ಯಮ ಕಡ್ಡಾಯಗೊಳಿಸುವುದು ಕಷ್ಟವಾಗುತ್ತದೆ. ಏಕೆಂದರೆ ಶಾಲೆಗಳಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವ ಅನೇಕ ಅಧ್ಯಾಪಕ/ಅಧ್ಯಾಪಕಿಯರಿಗೆ ಕನ್ನಡ ಬರುವುದೇ ಇಲ್ಲ' ಎಂದು ಹೇಳಿದ್ದಾರೆ! ಈ ಪರಿಸ್ಥಿತಿಗೆ ಏನು ಕಾರಣ? ಕನ್ನಡ ಬಾರದವರು ಹೇಗೆ ನೇಮಕವಾದರು? ನಮ್ಮ ರಾಜ್ಯದಲ್ಲಿದ್ದೂ ಕನ್ನಡವಲ್ಲಿ ಮಾತನಾಡಲಾಗದ, ಕನ್ನಡವನ್ನು ಓದಿ ಬರೆಯಲಾಗದ ವ್ಯಕ್ತಿಗಳ ಕನ್ನಡದ ಮಕ್ಕಳಿಗೆ ಅಧ್ಯಾಪನ ಮಾಡುತ್ತಿರುವ ಪರಿಸ್ಥಿತಿಗೆ ಕಾರಣಗಳೇನು? ಏನೇ ಆಗಲಿ ಈ ವರದಿಗಳು ಜಾರಿಗೆ ಬರಬೇಕು.

ಕನ್ನಡ ಚಳಿವಳಿಗಾರರು ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗಳಿಗೆ ಸೇರಿಸುತ್ತಾರೆ ಎಂದು ಹೇಳುತ್ತಾ ಕನ್ನಡವನ್ನು ಮೂಲೆಗುಂಪು ಮಾಡುವ ಹುನ್ನಾರವು ನಡೆದಿದೆ. ಕನ್ನಡ ಶಾಲೆಗಳೇ

ಇಲ್ಲದಂತೆ ಮಾಡುವ, ಅನಧಿಕೃತ ಇಂಗ್ಲಿಷ್ ಶಾಲೆಗಳು ಯಾವುದೇ ಕಾನೂನಿಗೂ ಹೆದರದ ಕಾರ್ಯನಿರ್ವಹಿಸುತ್ತಿರುವ ಪರಿಸ್ಥಿತಿಯಲ್ಲಿ ಕನ್ನಡದಲ್ಲೇ ತಮ್ಮ ಮಕ್ಕಳನ್ನು ಓದಿಸಬೇಕೆಂದಿರುವವರ ಪಾಡೇನು? ಈ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಕಾಣಬೇಕು; ಕನ್ನಡ ಶಿಕ್ಷಣ ಮಾಧ್ಯಮಕ್ಕೆ ಅಡ್ಡಿಯಾಗಬಾರದು. ಕನ್ನಡದಲ್ಲಿ ಶಿಕ್ಷಣ ಪಡೆಯುವುದು ಕನ್ನಡಿಗರ ಹಕ್ಕು; ಕನ್ನಡದಲ್ಲಿ ಕಲಿಸುವುದು ಕರ್ನಾಟಕದಲ್ಲಿನ ಶಿಕ್ಷಣ ಸಂಸ್ಥೆಗಳ ಹಾಗೂ ಅಧ್ಯಾಪಕರ ಕರ್ತವ್ಯ. ಇದಕ್ಕೆ ಸೂಕ್ತವಾದ ಕಾಯ್ದೆ ಕಾನೂನಗಳನ್ನು ಜಾರಿಗೆ ತರಬೇಕು. ಸರ್ಕಾರದ ಇಂತಹ ನೀತಿ ನಿಯಮಗಳನ್ನು ಪ್ರಾಮಾಣಿಕವಾಗಿ ಜಾರಿಯಲ್ಲಿರುವಂತೆ ನೋಡಿಕೊಳ್ಳುವುದು ಶಿಕ್ಷಣ ಇಲಾಖೆಯ ಅಧಿಕಾರಿಗಳ ಗುರುತರ ಜವಾಬ್ದಾರಿ.

ಆರು ವರ್ಷಗಳ ಕಾಲ ಶೃಂಗೇರಿಯ ಪ್ರಥಮದರ್ಜೆ ಕಾಲೇಜಿನಲ್ಲಿ ಗಣಿತಶಾಸ್ತ್ರ ವಿಭಾಗದ ಮುಖ್ಯಸ್ಥನಾಗಿದ್ದು ೧೯೭೩ರಲ್ಲಿ ರಾಷ್ಟ್ರೀಯ ವೈಮಾಂತರಿಕ್ಷ ಪ್ರಯೋಗಶಾಲೆಯಲ್ಲಿ (ಎನ್‌ಎಎಲ್, ಬೆಂಗಳೂರು) ಕೆಲಸಕ್ಕೆ ಸೇರಿದಾಗ ಅಲ್ಲಿ ಇದ್ದ ವಿಜ್ಞಾನಿಗಳ ಉನ್ನತಮಟ್ಟದ ಸಂಶೋಧನಾ ಚಟುವಟಿಕೆಗಳ ಪರಿಚಯವಾಗಿ ಈ ವಿಚಾರಗಳ ಸ್ಥೂಲ ಪರಿಚಯವಾದರೂ ಕನ್ನಡದಲ್ಲಿನ ಒಂದು ನೂತನ ವಿಜ್ಞಾನ ಪತ್ರಿಕೆಯ ಮೂಲಕ ನಮ್ಮ ಜನ ಹಾಗೂ ಮುಖ್ಯವಾಗಿ ನಮ್ಮ ವಿದ್ಯಾರ್ಥಿಗಳನ್ನು ತಲುಪಬೇಕು ಎನ್ನಿಸಿತು. ನಾನು ಮತ್ತು ಅಲ್ಲಿಯೇ ವಿಜ್ಞಾನಿಯಾಗಿದ್ದ ಡಾ॥ ಕೆ.ಜೆ ರಾವ್ (೧೯೭೭ರಿಂದ ಭಾರತೀಯ ವಿಜ್ಞಾನ ಮಂದಿರದಲ್ಲಿ ಪ್ರಾಧ್ಯಾಪಕರಾಗಿ ಪ್ರೊ॥ ಸಿ.ಎನ್.ಆರ್. ರಾವ್ ಜೊತೆಯಲ್ಲಿದ್ದು ಇತ್ತೀಚೆಗೆ ನಿವೃತ್ತರಾಗಿದ್ದಾರೆ) ನಮ್ಮ ಪ್ರಯೋಗಶಾಲೆಯ ಅನೇಕ ಹಿರಿಯ ವಿಜ್ಞಾನಿಗಳನ್ನು ಭೇಟಿಮಾಡಿ ಕನ್ನಡದಲ್ಲಿ ವಿಜ್ಞಾನ ಲೇಖನಗಳನ್ನು ಬರೆಯಲು ಕೇಳಿಕೊಂಡೆವು. ಇಂಗ್ಲಿಷ್‌ನಲ್ಲಾದರೆ ಬರೆದುಬಿಡಬಲ್ಲೆವು ಆದರೆ ಕನ್ನಡದಲ್ಲಿ ಬರೆಯಲಾರೆವು ಎಂದ ಅವರುಗಳನ್ನು ಒತ್ತಾಯಿಸಿ, ಒಲಿಸಿ, ಜೊತೆಯಲ್ಲಿ ಕುಳಿತು ಕನ್ನಡದ ಲೇಖನಗಳನ್ನು ಬರೆಸಿದೆವು. ಈ ಪತ್ರಿಕೆಯ ಪ್ರಕಟನೆಗೆ ಪ್ರಯೋಗಶಾಲೆಯ ನಿರ್ದೇಶಕರಾಗಿದ್ದ ಡಾ॥ ಎಸ್ ಆರ್ ವಲ್ಲೂರಿ ಅವರು (ಕನ್ನಡಿಗರಲ್ಲವಾದರೂ) ಸಂತೋಷದಿಂದ ಒಪ್ಪಿಗೆ ನೀಡಿ ಒತ್ತಾಸೆ ನೀಡಿ ೧೯೭೫ ನವೆಂಬರ್‌ನಲ್ಲಿ ಪ್ರಕಟವಾದ 'ಕಣಾದ' ಎಂಬ ಹೆಸರಿನ ನೂತನ ಕನ್ನಡ ವಿಜ್ಞಾನ ಪತ್ರಿಕೆಯ ಪ್ರಥಮ ಸಂಚಿಕೆಗೆ ಮುನ್ನುಡಿಯನ್ನು ಬರೆದರು. ಅಲ್ಲಿದ್ದ 'ಎಲ್ಲ ೧೯ ವಿಜ್ಞಾನ ಲೇಖನಗಳ ಪ್ರತಿಯೊಂದರ ಒಂದು ಪುಟದ ವಿಷಯಸಂಗ್ರಹವನ್ನು (Synopsis) ಬರೆಸಿಕೊಡಿ. ಅವುಗಳನ್ನು ಪ್ರತಿಮಾಡಿಸಿ ಕಣಾದದ ಪ್ರತಿಯೊಂದಿಗೆ ದೇಶದ ವಿವಿಧ ಭಾಗಗಳಲ್ಲಿರುವ ಸಿಎಸ್‌ಐಆರ್ ಪ್ರಯೋಗಶಾಲೆಗಳಿಗೆ ಕಳುಹಿಸುತ್ತೇನೆ. ಅವರುಗಳು ತಾವಿರುವ ರಾಜ್ಯಗಳ ಭಾಷೆಗಳಲ್ಲಿ ಇಂತಹ ಪತ್ರಿಕೆಗಳನ್ನು ಪ್ರಕಟಿಸಲಿ' ಎಂದು ತಿಳಿಸಿದರು. ಅಂತೆಯೇ ವಿಜ್ಞಾನಿ ಲೇಖಕರಿಗೆ ಹೇಳಿ Synopsis ಗಳನ್ನು ಬರೆಸಿದೆವು. ಇವುಗಳನ್ನು ವಿಜ್ಞಾನಿಗಳು ಇಂಗ್ಲಿಷ್‌ನಲ್ಲಿ ಬರೆದಿದ್ದುದರಿಂದ ನಾನು ಅವನ್ನು ಓದಲಿಲ್ಲ. ಅವುಗಳ ಒಂದು ಪ್ರತಿಯನ್ನು ಒಟ್ಟುಮಾಡಿ ನಿರ್ದೇಶಕರ ಅವಗಾಹನೆಗೆಂದು ನೀಡಿದೆವು. ಅವನ್ನು ಪರಿಶೀಲಿಸಿದ ನಿರ್ದೇಶಕರು ಇದ್ದಕ್ಕಿದ್ದಂತೆ ಸಿಟ್ಟಿನಿಂದ ಎದ್ದುನಿಂತು, Is this the English written by our Scientists? They have gone abroad. They have published papers in international journals. They have presented papers at international

conferences. Still They don't know English is it? Any high school student can write better English than this' ಎಂದವರೇ Synopsis ಕಟ್ಟನ್ನು ರೊಯ್ಯನೆ ಎಸೆದರು. ಅನಂತರದಲ್ಲಿ ಇವುಗಳನ್ನು ಬರೆದವರೊಡನೆ ಸ್ನೇಹಮಯವಾಗಿ ಮಾತನಾಡಿದಾಗ ಈ ಲೇಖನದ ಮೊದಲಲ್ಲಿ ತಿಳಿಸಿರುವ ಅನೇಕ ಸೈದ್ಧಾಂತಿಕಕ ಅಂಶಗಳು ಚರ್ಚಿತವಾಗಿ ಆರಂಭದ ಶಿಕ್ಷಣವು ಕನ್ನಡದಲ್ಲೇ ಇರಬೇಕು ಎಂಬುದು ಎಲ್ಲರ ಅಭಿಪ್ರಾಯವಾಗಿ ಹೊರಹೊಮ್ಮಿತು. ಅಂದಿನಿಂದ ಇಲ್ಲಿಯವರೆಗೆ ಪ್ರಯೋಗಶಾಲೆಯ ಎಲ್ಲ ವಿಜ್ಞಾನಿಗಳ ಹೃತ್ಪೂರ್ವಕ ಸಹಕಾರದಿಂದ 'ಕಣಾದ' ಪತ್ರಿಕೆಯ ೩೦ ಸಂಚಿಕೆಗಳು ನಿರ್ಬಾಧಿತವಾಗಿ ಪ್ರಕಟವಾಗಿ ಇಲ್ಲಿನ ವಿಜ್ಞಾನಿಗಳೇ ಕನ್ನಡದಲ್ಲಿ ಬರೆದ ೫೦೦ಕ್ಕೂ ಮೀರಿದ ಲೇಖನಗಳು ಮುದ್ರಿತವಾಗಿವೆ.

ನಮ್ಮ ದೇಶದ ವೈಜ್ಞಾನಿಕ ಸಂಸ್ಥೆಗಳಲ್ಲಿನ ಸಂಶೋಧನಾ ಚಟುವಟಿಕೆಗಳನ್ನು ಕುರಿತು ಲೇಖನಗಳನ್ನು ವಿವಿಧ ಅಂತಾರಾಷ್ಟ್ರೀಯ ವಿಜ್ಞಾನ ಪತ್ರಿಕೆಗಳಲ್ಲಿ ಪ್ರಕಟಿಸುವುದು ವಾಡಿಕೆ. ಹೀಗೆ ಪ್ರಕಟನೆಗಾಗಿ ಕಳುಹಿಸುವ ಲೇಖನಗಳನ್ನು ಆಯಾ ಪತ್ರಿಕೆಯ ಸಂಪಾದಕರು ಪರಿಶೀಲನೆ ಮತ್ತು ಅಭಿಪ್ರಾಯಗಳಿಗಾಗಿ ಕೆಲವು ತಜ್ಞರಿಗೆ ಕಳುಹಿಸುತ್ತಾರೆ. ಅವರು ಲೇಖನದ ವಿಷಯ ಪ್ರತಿಪಾದನೆಯ ನ್ಯೂನತೆಗಳು ಹಾಗೂ ಭಾಷಾ ವ್ಯತ್ಯಾಸಗಳು ಮುಂತಾದವನ್ನು ಗಮನಿಸಿ ಸರಿಪಡಿಸಲು ಲೇಖಕರಿಗೆ ವಾಪಸ್ಸು ಕಳುಹಿಸುತ್ತಾರೆ. ಆದ್ದರಿಂದಲೇ ತಾವು ಕಳುಹಿಸುವ ಬಹಳಷ್ಟು ಲೇಖನಗಳ ಪ್ರಕಟನೆ ಕನಿಷ್ಠ ೮ರಿಂದ ೧೦ ತಿಂಗಳುಗಳಾಗುತ್ತವೆ ಎಂಬುದು ಎನ್‌ಎಎಲ್‌ನ ವಿಜ್ಞಾನಿಗಳ ಅನುಭವ. ತಜ್ಞರು ಲೇಖಕರ ಭಾಷೆಯಲ್ಲಿ ಅನೇಕ ತಪ್ಪುಗಳನ್ನು ಗುರುತಿಸುತ್ತಾರೆ. ಆದರೆ ಭಾಷಾ ಸಂಬಂಧದಲ್ಲಿ ಎತ್ತುವ ಈ ಪ್ರಶ್ನೆಗಳು ಹಲವು ಬಾರಿ ವಿಚಿತ್ರವಾಗಿರುತ್ತವೆ. ಅಲ್ಲದೆ ಅನೇಕ ವೇಳೆ ಅವರ ಇಂಗ್ಲಿಷ್ ಭಾಷೆಯೇ ಸ್ವೀಕಾರಾರ್ಹ ವಾಗಿರುವುದಿಲ್ಲ.

ಅತಿ ಶುದ್ಧವಾದ, ವ್ಯಾಕರಣಬದ್ಧವಾದ ಇಂಗ್ಲಿಷ್ ಬರೆವಣಿಗೆಯು ಕಷ್ಟವೂ ಹೌದು ಮತ್ತು ಅದರ ಅಗತ್ಯವೂ ಇಲ್ಲ. ಇಷ್ಟರ ಮೇಲೆ, ಶುದ್ಧವೂ ಭಾಷಾಪರಿಪೂರ್ಣವೂ ಆದ ಇಂಗ್ಲಿಷ್‌ನ್ನು ಎಷು ಜನ ಬರೆಯುತ್ತಿದ್ದಾರೆ? ನೂರಕ್ಕೊಬ್ಬರು ಮಾತ್ರ ಅಂತಹವರಿದ್ದಾರು. ತಮಗೆ ಇಂಗ್ಲಿಷ್ ಚೆನ್ನಾಗಿ ಬರುತ್ತದೆ ಎಂದು ಹೇಳಿಕೊಳ್ಳುವ ಬಹುಪಾಲು ಮಂದಿಯು ಬರೆಯುವ ಇಂಗ್ಲಿಷ್‌ನ್ನು ಸ್ವೀಕರಿಸಲು ಖಂಡಿತ ಸಾಧ್ಯವಾಗುವುದಿಲ್ಲ. ವೈಮಾಂತರಿಕ್ಷ ಕ್ಷೇತ್ರದ ಸಂಶೋಧನೆ ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿರುವಾಗ, ಇಂಗ್ಲಿಷ್ ಮಾಧ್ಯಮದಲ್ಲೇ ಕಲಿತವರಿಗೂ ಕನ್ನಡ ಮಾಧ್ಯಮದವರಿಗೂ ಕೆಲಸಗಳ ಗುಣಮಟ್ಟದಲ್ಲಿ ಯಾವುದೇ ವ್ಯತ್ಯಾಸಗಳೂ ಕಂಡುಬಂದಿಲ್ಲ. ಇಲ್ಲಿ ಹಿರಿಯ ವಿಜ್ಞಾನಿಗಳಾಗಿ ಅನೇಕ ವರ್ಷಗಳಿಂದ ಅತ್ಯಂತ ಪ್ರಮುಖ ಹಾಗೂ ಅತ್ಯುಪಯುಕ್ತ ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿ ಹೆಸರು ಗಳಿಸುತ್ತಿರುವ ಬಹಳಷ್ಟು ವಿಜ್ಞಾನಿಗಳ ಪ್ರಾಥಮಿಕ ಶಿಕ್ಷಣ ಕನ್ನಡವೇ ಎಂಬುದನ್ನು ಇಲ್ಲಿ ಗಮನಿಸಬೇಕು. ಪ್ರಸಿದ್ಧ ವಿಜ್ಞಾನಿಗಳು ಮತ್ತು ತಂತ್ರಜ್ಞಾನಿಗಳೊಡನೆ ಕಳೆದ ೩೨ ವರ್ಷಗಳ ನನ್ನ ಒಡನಾಟದಲ್ಲಿ ನಾನು ಕಂಡಿರುವ ಸತ್ಯ ಇದು.

ಇನ್ನು ವೈಯಕ್ತಿಕವಾಗಿ ನನ್ನ ಸಂಶೋಧನಾ ಪರಿಯೋಜನೆಗಳಿಗೆ ಒಂದು ವರ್ಷದ ಅವಧಿಗೆಂದು ತಾತ್ಕಾಲಿಕ ಸಹಾಯಕರಾಗಿ ಆಗಾಗ್ಗೆ ಇಂಜಿನಿಯರಿಂಗ್ ಪದವೀಧರರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಇವರ ಪೈಕಿ ಚಿತ್ರದುರ್ಗ, ಬಳ್ಳಾರಿ, ಚಿಕ್ಕಮಗಳೂರು ಮುಂತಾದ ಕಡೆ ಇಂಜಿನಿಯರಿಂಗ್ ಶಿಕ್ಷಣ ಪಡೆದ (ಪ್ರಾಥಮಿಕ ಶಾಲೆಯಲ್ಲಿ ಕನ್ನಡದಲ್ಲೇ ಓದಿದ) ಪದವೀಧರರು (ಒಂದಿಬ್ಬರು ಹಿಂದುಳಿದ ವರ್ಗದವರೂ ಹೌದು) ಅತ್ಯುತ್ತಮ ಕಾರ್ಯವೆಸಗಿ ನನ್ನನ್ನು ತೃಪ್ತಿಗೊಳಿಸಿದರು.

## ಕನ್ನಡ ಮಾಧ್ಯಮ

ಆಧುನಿಕ ವಿಜ್ಞಾನ ತಂತ್ರಜ್ಞಾನಗಳ ಭಾಷೆ ಇಂಗ್ಲಿಷ್ ಆಗಿರುವುದೇನೋ ನಿಜ. ಆದರೆ ಅವುಗಳನ್ನು ಕನ್ನಡದ ಮೂಲಕ ಕಲಿಯುವುದರಲ್ಲಿ ಯಾವ ತೊಡಕೂ ಇಲ್ಲ. ನಮ್ಮ ಅರಿವಿಗೆ ಬಂದ ವಿಷಯಗಳನ್ನು ಅಭಿವ್ಯಕ್ತಗೊಳಿಸುವ ಶಕ್ತಿ ಇದ್ದರೆ ಮಾತ್ರ ಅದು 'ಭಾಷೆ' ಎನಿಸಿಕೊಳ್ಳುತ್ತದೆ. ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವುಳ್ಳ ಪ್ರಬುದ್ಧ ಭಾಷೆಯಾದ ಕನ್ನಡಕ್ಕೆ ಇದು ಖಂಡಿತಾ ಸಾಧ್ಯ. ಅತ್ಯಾಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನ ವಿಚಾರಗಳನ್ನು ಕನ್ನಡದಲ್ಲಿ ಸುಲಭವಾಗಿ ಮತ್ತು ಸರಳವಾಗಿ ತಿಳಿಸಬಹುದು. ಇದನ್ನು ಈಗಾಗಲೇ ಅನೇಕ ವಿಜ್ಞಾನ ಪುಸ್ತಕಗಳು, ಪತ್ರಿಕೆಗಳು ಮತ್ತು ಲೇಖನಗಳ ಮೂಲಕ ತೋರಿಸಿಕೊಡಲಾಗಿದೆ.

ಈ ಸಂದರ್ಭದಲ್ಲಿ ಪಾರಿಭಾಷಿಕ ಪದಗಳ ಬಳಕೆಯ ಬಗ್ಗೆ ಆಕ್ಷೇಪಣೆಗಳನ್ನು ಮಾಡಲಾಗುತ್ತದೆ. ಕನ್ನಡ ಶಿಕ್ಷಣ ಮಾಧ್ಯಮಕ್ಕೆ ವಿರೋಧವನ್ನು ಒಡ್ಡಲು ಇದನ್ನು ಅಸ್ತ್ರವಾಗಿ ಬಳಸಲಾಗುತ್ತದೆ. ಆದರೆ ಇದು ಕೇವಲ ನೆಪ ಹಾಗೂ ವಿಷಯಾಂತರಕ್ಕೆ ಉಪಾಯ ಮಾತ್ರ. ತಾಂತ್ರಿಕ ಪದಗಳ ಬಗ್ಗೆ ಮೃದು ಧೋರಣೆ ಇದ್ದರೆ ಸಾಕು; ಅಗತ್ಯವೆನಿಸಿದ ಪದಗಳನ್ನು ಅನುವಾದಿಸದೆ ಹಾಗೆಯೇ ಬಳಸಿಕೊಳ್ಳಬಹುದು. ವಿಷಯಗಳನ್ನು ವಿವರಿಸಬೇಕಾದ ಮಾಧ್ಯಮಕ್ಕೂ ಇದಕ್ಕೂ ಅನವಶ್ಯಕ ತಳಕು ಹಾಕಬಾರದು.

## ವೃತ್ತಿ ಶಿಕ್ಷಣ–ಕನ್ನಡದಲ್ಲಿ ಬರೆಯುವ ಹಕ್ಕು

ಮಾಧ್ಯಮಿಕ ಶಾಲೆಯವರೆಗೆ ಕನ್ನಡ ಮಾಧ್ಯಮವಿದ್ದರೂ ವಿದ್ಯಾರ್ಥಿಗಳು ಇಂಗ್ಲಿಷ್‌ನ್ನು ಭಾಷೆಯನ್ನಾಗಿಯೂ, ಮುಂದಿನ ವಿದ್ಯಾಭ್ಯಾಸಕ್ಕೆ ಹಾಗೂ ವ್ಯಾವಹಾರಿಕ ಅಗತ್ಯಗಳಿಗೆ ಅನುಗುಣವಾಗಿಯೂ ಕಲಿತೇ ಇರುತ್ತಾರೆ. ಆದ್ದರಿಂದ ಪ್ರೌಢಶಾಲೆಗೆ ಬರುವ ಬಹಳಷ್ಟು ಮಂದಿ ಇಂಗ್ಲಿಷ್ ಮಾಧ್ಯಮಕ್ಕೆ ಪೂರ್ಣವಾಗಿ ಒಗ್ಗಿಕೊಂಡುಬಿಡುತ್ತಾರೆ. ಇಲ್ಲಿನ ಕೆಲವು ವಿದ್ಯಾರ್ಥಿಗಳನ್ನು ಅಂದರೆ ಉನ್ನತ ವಿಜ್ಞಾನ ವಿಷಯಗಳ ಅಧ್ಯಯನದಲ್ಲಿ ಆಸಕ್ತಿ ಅಥವಾ ಅವಕಾಶವಿಲ್ಲದ ವಿದ್ಯಾರ್ಥಿಗಳನ್ನು ಗಮನಿಸೋಣ. ಅವರುಗಳಲ್ಲಿ ಅನೇಕರು (ಕಲೆ, ವಾಣಿಜ್ಯ, ಕಾನೂನು ಮುಂತಾದ ವಿಜ್ಞಾನೇತರ ವಿಷಯಗಳನ್ನುಳಿದು) ಐಟಿಐ ಡಿಪ್ಲೋಮಾ ಮುಂತಾದ ವೃತ್ತಿಶಿಕ್ಷಣ ಕೋರ್ಸುಗಳಿಗೆ ಸೇರುವುದನ್ನು ನೋಡುತ್ತಿದ್ದೇವೆ. ಈ ಶಿಕ್ಷಣ ವಿಭಾಗಗಳಲ್ಲಿನ ಅಧ್ಯಯನ ವಿಷಯಗಳು ವಿದ್ಯಾರ್ಥಿಗಳನ್ನು ತಾಂತ್ರಿಕತೆಯಲ್ಲಿ ಪರಿಣತರನ್ನಾಗಿ ಮಾಡುತ್ತವೆ. ಇಂದು ಬಳಕೆಯಲ್ಲಿರುವ ಅನೇಕ ಬಗೆಯ ತಾಂತ್ರಿಕ ವಿಷಯಗಳ, ಯಂತ್ರ ಮತ್ತು ಯಂತ್ರ ಭಾಗಗಳ, ವಿದ್ಯುತ್ ಮತ್ತು ವಿದ್ಯುನ್ಮಾನ ಉಪಕರಣಗಳ ರಚನೆ, ತಯಾರಿಕೆ, ಬಳಕೆಯ ವಿಧಾನ

ಮುಂತಾದ ವಿಷಯಗಳನ್ನು ಇಲ್ಲಿನ ವಿದ್ಯಾರ್ಥಿಗಳು ಕರಗತ ಮಾಡಿಕೊಳ್ಳುತ್ತಾರೆ. ಆದರೆ ಯಾಂತ್ರಿಕತೆ ಹಾಗೂ ತಾಂತ್ರಿಕತೆಯ ಎಲ್ಲ ಅಂಶಗಳನ್ನು ಅರಿತಿದ್ದರೂ, ಅವುಗಳಲ್ಲಿ ಪರಿಣತರಾಗಿದ್ದರೂ ಸಹ ಸಾಮಾನ್ಯವಾಗಿ ಈ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಮಾಧ್ಯಮ ಅನಗತ್ಯವಾದ ಕಿರುಕುಳಗಳನ್ನು ನೀಡುತ್ತಿರುತ್ತದೆ; ಈ ವಿದ್ಯಾರ್ಥಿಗಳಿಗೆ ಪೂರ್ಣ ಇಂಗ್ಲಿಷ್ ಮಾಧ್ಯಮ ಕಷ್ಟವಾಗಬಹುದು. ಇಲ್ಲಿ ಕಲಿಯುವ ವಿಷಯಗಳಲ್ಲಿ ಪ್ರಬುದ್ಧತೆ ಗಳಿಸಿದ್ದರೂ ಇದಕ್ಕೂ ಇಂಗ್ಲಿಷ್‌ಗೂ ಸಂಬಂಧವಿಲ್ಲದಿದ್ದರೂ ಇಂಗ್ಲಿಷ್ ಮಾಧ್ಯಮದ ಕಾರಣದಿಂದ ವಿದ್ಯಾರ್ಥಿಗಳು ಅಂಕ ಗಳಿಕೆಯಲ್ಲಿ ಹಿಂದಾಗುತ್ತಾರೆ. ಇಂತಹ ವ್ಯವಸ್ಥೆ ವಿದ್ಯಾರ್ಥಿಗಳಿಗೆ ದ್ರೋಹವೆಸಗಿದಂತೆ. ಆದ್ದರಿಂದ ಈ ರೀತಿಯ ವಿದ್ಯಾಭ್ಯಾಸದಲ್ಲಿ ವಿದ್ಯಾರ್ಥಿಗಳು ತಾವು ಇಚ್ಛೆಪಟ್ಟರೆ ಪರೀಕ್ಷೆಗಳಲ್ಲಿ ಉತ್ತರಗಳನ್ನು ಕನ್ನಡದಲ್ಲೂ ಬರೆಯಲು ಅವಕಾಶವಿರಬೇಕು. ವಿಷಯಗಳನ್ನು ಬಹಳ ಚೆನ್ನಾಗಿ ತಿಳಿದುಕೊಂಡಿದ್ದರೂ ಇಂಗ್ಲಿಷಿನಲ್ಲಿ ಸರಿಯಾಗಿ ಅಭಿವ್ಯಕ್ತಿಗೊಳಿಸಲಾಗದ ವಿದ್ಯಾರ್ಥಿಗಳಿಗೆ ಈ ಸೌಲಭ್ಯ ಒದಗಿಸಲೇಬೇಕು. ಅಧ್ಯಾಪಕರಂತೂ ವಿಷಯಗಳನ್ನು ವಿವರಿಸುವಾಗ ಕನ್ನಡವನ್ನು ಬಳಸಲು ಹಿಂಜರಿಯಬಾರದು. ಇಂಗ್ಲಿಷ್ ಮತ್ತು ಕನ್ನಡವನ್ನು ಬೆರೆಸಿ ಬಳಸುವುದರಲ್ಲಿ ಯಾವ ಸಂಕೋಚ ಅಥವಾ ಮುಜುಗರ ಇರಬಾರದು. ವಿಷಯಗಳನ್ನು ವಿದ್ಯಾರ್ಥಿಗಳಿಗೆ ಮನದಟ್ಟು ಮಾಡುವುದೇ ಅಧ್ಯಾಪಕರ ಕರ್ತವ್ಯ ಹಾಗೂ ಗುರಿಯಾಗಿರುವುದರಿಂದ ಭಾಷೆಯ ವಿಷಯದಲ್ಲಿ ಮಡಿವಂತಿಕೆ ಏಕೆ?

### ಶಿಕ್ಷಣದ ಉದ್ದೇಶ

ಶಿಕ್ಷಣದ್ದು ಯಾವುದೇ ಮಾಧ್ಯಮವಾದರೂ ಪರೀಕ್ಷೆಗಳ ಉದ್ದೇಶ ವಿದ್ಯಾರ್ಥಿಯು ವಿಷಯಗಳನ್ನು ಸರಿಯಾಗಿ ಗ್ರಹಿಸಿದ್ದಾನೆಂಬುದನ್ನು ಪರೀಕ್ಷಿಸುವುದು ತಾನೆ? ಅದಕ್ಕೆ ಭಾಷೆಯ ಬಂಧನ ಏಕಿರಬೇಕು? ಆದ್ದರಿಂದಲೇ ಕರ್ನಾಟಕದಲ್ಲಿನ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಕಲಿಯುವ ಮತ್ತು ಕನ್ನಡದಲ್ಲೇ ಬರೆಯುವ ಹಕ್ಕನ್ನು ಈ ಕೂಡಲೇ ನೀಡಬೇಕು. ಇದು ಅತ್ಯಂತ ಮುಖ್ಯ ಸಂಗತಿ. ಐ.ಟಿ.ಐ., ಡಿಪ್ಲೋಮಾ ಮುಂತಾದ ತಾಂತ್ರಿಕ ಶಿಕ್ಷಣ ಪಡೆಯುವ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಈ ವ್ಯವಸ್ಥೆ ಅತ್ಯಂತ ಲಾಭದಾಯಕವಾದುದು. ಈ ಭಾಷಾಮುಕ್ತ ಅವಕಾಶವನ್ನು ಈ ಕೂಡಲೇ ಜಾರಿಗೆ ತರಬೇಕು. ಅಂತೆಯೇ ಟಿಸಿಎಚ್, ಬಿಇಡಿ, ಬಿಇ, ಎಂಬಿಬಿಎಸ್ ಮುಂತಾದ ಕೋರ್ಸ್‌ಗಳಲ್ಲೂ ಭಾಷಾ ಬಂಧನವಿರಬಾರದು. ಈ ಪರೀಕ್ಷೆಗಳಲ್ಲೂ ವಿದ್ಯಾರ್ಥಿಗಳು ಕನ್ನಡ ಮತ್ತು ಇಂಗ್ಲಿಷ್‌ಅನ್ನು ಧಾರಾಳವಾಗಿ ಬೆರೆಸಿ ಬರೆಯುವ ಅವಕಾಶವಿರಬೇಕು.

ನಾನು ಕಾಲೇಜಿನಲ್ಲಿ ಗಣಿತಶಾಸ್ತ್ರದ ಅಧ್ಯಾಪಕನಾಗಿದ್ದಾಗ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ವಿವರಿಸಿದರೆ ವಿಷಯ ಅರ್ಥವಾದಾಗ ಅವರ ಮುಖಗಳಿಂದ ಹೊರಹೊಮ್ಮುತ್ತಿದ್ದ ಸಂತೋಷ, ತೃಪ್ತಿಯ ಭಾವಗಳನ್ನು, ಅವರು ಉತ್ತಮ ಅಂಕಗಳನ್ನು ಗಳಿಸುತ್ತಿದ್ದುದನ್ನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಹೆಸರಾಂತ ಪ್ರಾಧ್ಯಾಪಕ ಪ್ರೊ. ಎಚ್.ಎಸ್.ಕೆ. ಅವರ ಅನುಭವವೂ ಇದೇ ಆಗಿದೆ. ಇಂತಹ ನೂರಾರು ಉದಾಹರಣೆಗಳನ್ನು ನೀಡಬಹುದು, ಅನೇಕಾನೇಕ ಶಿಕ್ಷಣ ತಜ್ಞರು ಕನ್ನಡ ಮಾಧ್ಯಮದ ಪರವಾದ ಅಭಿಪ್ರಾಯಗಳನ್ನು ಮತ್ತೆ ಮತ್ತೆ ಮಂಡಿಸಿದ್ದಾರೆ. ಅತ್ಯಾಧುನಿಕ ವಿಜ್ಞಾನ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ವಿಜ್ಞಾನಿಗಳ ಅಭಿಪ್ರಾಯವೂ ಇದೇ ಆಗಿದೆ.

## ತಮಿಳಿನಲ್ಲಿ ವೃತ್ತಿಶಿಕ್ಷಣ

ತಮಿಳುನಾಡಿನಲ್ಲಿ ಈ ಪ್ರಯೋಗವು ಅತ್ಯಂತ ಯಶಸ್ವಿಯಾಗಿದೆ. ಅಲ್ಲಿ ಇದು ಸಹಜ ಕ್ರಿಯೆ. ಬೆಂಗಳೂರಿನ ಪಕ್ಕದ ಹೊಸೂರಿನಲ್ಲಿ ಕೆಲಸ ಮಾಡುವ ನನ್ನ ಮಿತ್ರರು ನೀಡಿದ ವೃತ್ತಿಶಿಕ್ಷಣ ಪರೀಕ್ಷೆಯ ಹಲವಾರು ಉತ್ತರ ಪತ್ರಿಕೆಗಳಲ್ಲಿ ತಮಿಳು ಮತ್ತು ಇಂಗ್ಲಿಷನ್ನು ಧಾರಾಳವಾಗಿ ಬೆರೆಸಿದ್ದಾರೆ. ವಿದ್ಯಾರ್ಥಿಗಳು ವಾಕ್ಯಗಳನ್ನು ಇಂಗ್ಲಿಷಿನಲ್ಲಿ ಆರಂಭಿಸಿ ತಮಿಳಿನಲ್ಲಿ ಮುಗಿಸಿದ್ದಾರೆ. ತಮಿಳಿನಲ್ಲಿ ಆರಂಭವಾದ ವಾಕ್ಯಗಳು ಇಂಗ್ಲಿಷಿನಲ್ಲಿ ಅಂತ್ಯಗೊಂಡಿವೆ. ಹಲವಾರು ಪ್ಯಾರಾಗಳು ಇಂಗ್ಲಿಷಿನಲ್ಲಿವೆ. ಕೆಲವು ತಮಿಳಿನಲ್ಲೂ ಇವೆ. ತಾಂತ್ರಿಕ ಪದಗಳನ್ನು ತಮಿಳು ಲಿಪಿಯಲ್ಲಿಯೇ ಬರೆದಿದ್ದಾರೆ. ನಾನು ಈ ಉತ್ತರ ಪತ್ರಿಕೆಗಳನ್ನು ನನ್ನ ಹಲವಾರು ತಮಿಳು ಮಿತ್ರರಿಗೆ ತೋರಿಸಿ ಓದಿಸಿದಾಗ ವಿದ್ಯಾರ್ಥಿಗಳು ತಾಂತ್ರಿಕ ವಿಷಯಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವುದು ಸ್ಪಷ್ಟವಾಯಿತು. ಭಾಷೆಯ ಬಳಕೆಯಲ್ಲಿ ಯಾವ ಸಂಕೋಚವೂ ಇಲ್ಲದ ಪರಿಸ್ಥಿತಿಯನ್ನೂ, ಇದನ್ನು ಅಲ್ಲಿನ ಸರಕಾರ ಹಾಗೂ ವಿದ್ಯಾ ಸಂಸ್ಥೆಗಳ ಆಡಳಿತ ವರ್ಗದವರೂ, ಅಧ್ಯಾಪಕರೂ ಸಂತೋಷದಿಂದ ಒಪ್ಪಿರುವುದನ್ನೂ ನಾವು ಗಮನಿಸಲೇಬೇಕು. ಹೀಗೆ ತಮಿಳು–ಇಂಗ್ಲಿಷ್‌ನಲ್ಲಿ ಉತ್ತರಿಸಿ ಪದವೀಧರರಾದ ಅನೇಕ ತಮಿಳರು ಬೆಂಗಳೂರಿನ ರಾಷ್ಟ್ರೀಯ, ಅಂತಾರಾಷ್ಟ್ರೀಯ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗಳಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪದವಿಯೋತ್ತರ, ನೌಕರಿಗೆ ಸೇರಿದ ಪರಿಸ್ಥಿತಿಯಲ್ಲಿ ಅವರುಗಳು ತಮಗೆ ಅಗತ್ಯವಾದ ಇಂಗ್ಲಿಷನ್ನು ಸುಲಭವಾಗಿ ರೂಢಿಸಿಕೊಳ್ಳುವುದರಲ್ಲಿ ಸಫಲರಾಗಿದ್ದಾರೆ. ಇದು ಸಾಧ್ಯವೂ ಹೌದು.

ಕನ್ನಡ ಮಾಧ್ಯಮದಲ್ಲಿ ಕಲಿಯುವ ಕನ್ನಡಿಗರಿಗೂ ಕಾಲಕ್ರಮದಲ್ಲಿ ವ್ಯವಹಾರಕ್ಕೆ ಅಗತ್ಯವಾದಷ್ಟು ಇಂಗ್ಲಿಷನ್ನು ಸುಲಭವಾಗಿ ಕಲಿತು ಬಳಸಲು ಸಾಧ್ಯವಾಗುತ್ತದೆ. ಇದು ನನ್ನಂತಹ ಅನೇಕರ ಅನುಭವವೂ ಹೌದು. ಆದ್ದರಿಂದ ಬುದ್ಧಿವಂತ ಕನ್ನಡ ವಿದ್ಯಾರ್ಥಿಗಳೇಕೆ ಕನ್ನಡದಲ್ಲಿ ಬರೆಯುವಂತಹ ಅವಕಾಶಗಳಿಂದ ವಂಚಿತರಾಗಬೇಕು?

## ಶಿಕ್ಷಣ ಸಂಸ್ಥೆಗಳ ಜವಾಬ್ದಾರಿ

ಕರ್ನಾಟಕದ ಜಿಲ್ಲೆಗಳಲ್ಲಿ ೧೯೦ಕ್ಕೂ ಮೀರಿದ ಖಾಸಗಿ, ಅನುದಾನಿತ ಹಾಗೂ ಸರ್ಕಾರಿ ಪಾಲಿಟೆಕ್ನಿಕ್/ತಾಂತ್ರಿಕ ಶಿಕ್ಷಣ ಸಂಸ್ಥೆಗಳಿವೆ. ಇವುಗಳು ನೀಡುವ ಶಿಕ್ಷಣದಲ್ಲಿ ಇಂಗ್ಲಿಷ್‌ನೊಡನೆ ಕನ್ನಡವನ್ನೂ ಬೆರೆಸುವುದರಲ್ಲಿ ಯಾವ ನಿರ್ಬಂಧವೂ ಇರಬಾರದು; ಬಹುತೇಕವಾಗಿ ಅನವಶ್ಯಕವಾದ ಇಂಗ್ಲಿಷ್‌ನ ಕೋಟಲೆಯಿಂದ ಇಲ್ಲಿನ ವಿದ್ಯಾರ್ಥಿಗಳನ್ನು ಪಾರುಮಾಡಬೇಕು; ನಮ್ಮ ರಾಜ್ಯದ ಪ್ರತಿಭೆಗಳು ಕಮರಿಹೋಗುವುದನ್ನು ತಪ್ಪಿಸಬೇಕು. ಹಾಗಾದಲ್ಲಿ ಮಾತ್ರ ಈ ವಿದ್ಯಾ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಅನೇಕಾನೇಕ ಪ್ರತಿಭಾವಂತ ವಿದ್ಯಾರ್ಥಿಗಳು ತಮ್ಮ ತಾಂತ್ರಿಕ ಪರಿಣತೆಯನ್ನು ಹೆಚ್ಚಿಸಿಕೊಂಡು ಉತ್ತಮ ಉದ್ಯೋಗಗಳನ್ನು ಗಳಿಸಲು ಸಾಧ್ಯವಾಗುತ್ತದೆ.

ಈ ಮೇಲ್ಕಾಣಿಸಿದ ವಿಚಾರಗಳನ್ನು ಎಲ್ಲ ಪ್ರಾಜ್ಞರೂ ಒಪ್ಪುತ್ತಾರೆಂದು ನಂಬಿದ್ದೇನೆ. ಅಂತೆಯೇ ಈ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿ ಸಮಿತಿಗಳ ಸದಸ್ಯರು, ಪ್ರಿನ್ಸಿಪಾಲರು, ಶಿಕ್ಷಕರು ಮುಂತಾಗಿ ಎಲ್ಲರೂ ತಮ್ಮ ತಮ್ಮ ವಿದ್ಯಾ ಸಂಸ್ಥೆಗಳಲ್ಲಿ ಕನ್ನಡವನ್ನು ಧಾರಾಳವಾಗಿ ಬಳಸಲು

ಅಗತ್ಯವಾದ ಎಲ್ಲ ರೀತಿಯ ಪ್ರೋತ್ಸಾಹವನ್ನು ನೀಡಬೇಕಾಗಿದೆ. ಈ ಶಿಕ್ಷಣ ವ್ಯವಸ್ಥೆಗೆ ಸಂಬಂಧಪಟ್ಟ, ವಿದ್ಯಾ ಇಲಾಖೆಯ ಅಧಿಕಾರಿಗಳೂ ಸಹ ಈ ರೀತಿಯ ಪ್ರೋತ್ಸಾಹವನ್ನು ಮತ್ತು ಪರೀಕ್ಷೆಗಳಲ್ಲಿ ಕನ್ನಡವನ್ನೂ ಬೆರೆಸಿ ಉತ್ತರಗಳನ್ನು ಬರೆಯಲು ಅವಕಾಶವನ್ನು ನೀಡಬೇಕಾಗಿದೆ. ಈ ಬಗ್ಗೆ ಅನಗತ್ಯವಾದ ಹಾಗೂ ಆಧಾರವಿಲ್ಲದ ಅನುಮಾನಗಳು ಮತ್ತು ನಿಲುವುಗಳಿಗೆ ಅವಕಾಶಮಾಡಿಕೊಡದೆ ವಿದ್ಯಾರ್ಥಿಗಳ ಯೋಗಕ್ಷೇಮ, ಕನ್ನಡಿಗರ ಹಿತಾಸಕ್ತಿ ಮತ್ತು ಕರ್ನಾಟಕದ ಅಭಿವೃದ್ಧಿಯನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ.

ಈ ಭಾಷಾಮುಕ್ತ ವ್ಯವಸ್ಥೆಯ ಅನುಕೂಲತೆಗಳನ್ನು ಮನಗಂಡ ಕರ್ನಾಟಕದ ಕೆಲವು ಇಂಜಿನಿಯರಿಂಗ್ ಕಾಲೇಜು ವಿದ್ಯಾರ್ಥಿಗಳು ತಮ್ಮ ಸ್ವಂತ ಪರಿಶ್ರಮದಿಂದ ಕನ್ನಡದಲ್ಲಿ ಉತ್ತರ ಬರೆಯುವುದಾಗಿ ತಿಳಿಸಿದರೂ ಅವರ ಬೇಡಿಕೆಗಳನ್ನು ಒಪ್ಪದ ಉದಾಹರಣೆಗಳನ್ನು ಮಿತ್ರರು ತಿಳಿಸಿದ್ದಾರೆ. ಇದು ವಿಷಾದಕರ ಸಂಗತಿ.

ನಾನು ಭಾಗವಹಿಸಿದ ಹಲವು ರಾಷ್ಟ್ರೀಯ ಸಮ್ಮೇಳನಗಳಲ್ಲಿ ವೈಜ್ಞಾನಿಕ ಪ್ರಬಂಧಗಳನ್ನು ಮಂಡಿಸುವಾಗ ಹಿಂದಿ ಭಾಷೆಯನ್ನು ಧಾರಾಳವಾಗಿ ಬಳಸಿರುವುದನ್ನು ಕಂಡಿದ್ದೇನೆ. ಇದು ವಿಷಯಗಳನ್ನು ಚೆನ್ನಾಗಿ ವಿವರಿಸಲು ಅತ್ಯಂತ ಸಹಾಯಕವಾಗಿ ಪರಿಣಮಿಸಿದೆ. ಇಂಗ್ಲಿಷ್-ಹಿಂದಿ ಬೆರಕೆಯಲ್ಲಿ ಯಾವ ಸಂಕೋಚವೂ ಇಲ್ಲದ ಪರಿಸ್ಥಿತಿ ಸಹಜವಾಗಿ ಪರಿಣಮಿಸಿದೆ.

## ತಬ್ಬಲಿಯಾಗುತ್ತಿರುವ ಕನ್ನಡಿಗರು

ಒಟ್ಟಿನಲ್ಲಿ ನಮಗೆ ಬೇಕಾದ ಕೇವಲ ವ್ಯಾವಹಾರಿಕ ಇಂಗ್ಲಿಷಿಗೇಕೆ ಇಷ್ಟೊಂದು ಗದ್ದಲ, ಮಕ್ಕಳ ಹಿತಾಸಕ್ತಿಯ ಬಲಿ, ನಮ್ಮ ಭಾಷೆಯನ್ನು ಕುರಿತು ಏಕೆ ತಿರಸ್ಕಾರ? ಇಂಗ್ಲಿಷ್ ಚೆನ್ನಾಗಿ ಬಾರದಿದ್ದರೂ ವಿಜ್ಞಾನ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸೃಜನಾತ್ಮಕತೆ ಹಾಗೂ ಪ್ರತಿಭೆಯನ್ನು ಮೆರೆದಿರುವ ಅನೇಕ ತರುಣರನ್ನು ನಾವು ಗುರುತಿಸಬಹುದು. ಕನ್ನಡ ಗಣಕ ಪರಿಷತ್ತಿನ ಬಹುಪಾಲು ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಕೊಂಡು ಪ್ರಮುಖ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿರುವವರು ಕನ್ನಡದಲ್ಲೇ ಕಲಿತವರು. ವ್ಯವಹಾರಕ್ಕೆ ಅಗತ್ಯವಾದ ಇಂಗ್ಲಿಷನ್ನು ಅವರು ಕಲಿತಿದ್ದಾರೆ. ಅವರ ಪ್ರತಿಭೆಯ ವಿಕಾಸಕ್ಕೆ, ಅವರ ಸಾಧನೆಗಳಿಗೆ ಕನ್ನಡ ವಿದ್ಯಾಭ್ಯಾಸ ಖಂಡಿತಾ ಅಡ್ಡಿಯಾಗಿಲ್ಲ; ಕಾಲಕ್ರಮದಲ್ಲಿ ಅವರು ಸುಲಲಿತವಾದ ಇಂಗ್ಲಿಷನ್ನೂ ರೂಢಿಸಿಕೊಂಡಿದ್ದಾರೆ.

ಈ ಎಲ್ಲ ಕಾರಣಗಳಿಂದ ಕರ್ನಾಟಕದಲ್ಲೇ ಕನ್ನಡವು ತಬ್ಬಲಿಯಾಗುತ್ತಿದೆ. ಬುದ್ಧಿವಂತ ಕನ್ನಡಿಗ ಬಾಲಕರು ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ. ಮುಂದಿನ ಕನ್ನಡಿಗ (?) ಪ್ರಜೆಗಳಾದ ವಿದ್ಯಾರ್ಥಿಗಳಲ್ಲಿ ಬಹುಪಾಲು ಮಂದಿ ಕನ್ನಡದಿಂದ ಈಗಾಗಲೇ ದೂರವಾಗಿದ್ದಾರೆ. ಕನ್ನಡ, ಕನ್ನಡಿಗ ಮತ್ತು ಕರ್ನಾಟಕವನ್ನು ಕುರಿತಂತೆ ಸ್ಫೋಟಕ ಪರಿಸ್ಥಿತಿ ಉಂಟಾಗುತ್ತಿದೆ. ಒಂದು ಜನಾಂಗ ಅಥವಾ ಸಂಸ್ಕೃತಿಯನ್ನು ನಾಶಮಾಡಬೇಕಾದರೆ ಅದರ ಭಾಷೆಯನ್ನು ಕೊಲ್ಲು ಎಂಬ ನುಡಿಯು ಕನ್ನಡಿಗ-ಕರ್ನಾಟಕಕ್ಕೆ ಸಂಬಂಧಿಸಿದಂತೆ ನಿಜವಾಗುವ ದಿನಗಳು ಹತ್ತಿರ ಬರುತ್ತಿವೆ.

ಕರ್ನಾಟಕದಲ್ಲಿ ಕನಿಷ್ಠ ೫ನೆಯ ತರಗತಿಯಿಂದ ಮಾತ್ರ ಆರಂಭಿಸಿ ಇಂಗ್ಲಿಷನ್ನು ಚೆನ್ನಾಗಿಯೇ ಹೇಳಿಕೊಡಬೇಕು. ಕನಿಷ್ಠ ೭ನೆಯ ತರಗತಿವರೆಗಾದರೂ ಕಡ್ಡಾಯವಾಗಿ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು. ಪ್ರೊ. ಚಂದ್ರಶೇಖರ ಪಾಟೀಲ/ಪ್ರೊ. ಬರಗೂರು ರಾಮಚಂದ್ರಪ್ಪ ಅವರ ಶಿಕ್ಷಣ ಮಾಧ್ಯಮದ ವರದಿಗಳು ಮೂಲೆಗುಂಪಾಗದೆ ತಕ್ಷಣ ಜಾರಿಗೆ ಬರಬೇಕು. ಮುಂದುವರೆದು ಶಿಕ್ಷಣದ ಯಾವುದೇ ಹಂತದಲ್ಲಾದರೂ ಕನ್ನಡದಲ್ಲಿ ಬರೆಯುವ ಅವಕಾಶವಿರಬೇಕು. ಗಣಕೀಕರಣದ ಮಾಧ್ಯಮವು ಕನ್ನಡವೇ ಆಗಿರಬೇಕು. ಕರ್ನಾಟಕದ ಆಡಳಿತ ಭಾಷೆ ಕನ್ನಡವಾದ್ದರಿಂದ ಎಲ್ಲ ಆಡಳಿತವನ್ನೂ ಕನ್ನಡದಲ್ಲೇ ನಡೆಸಬೇಕು. ಈ ವಿಷಯಗಳ ಪ್ರಜ್ಞೆ ಮತ್ತು ಅವುಗಳ ಪ್ರಾಮಾಣಿಕ ಅನುಷ್ಠಾನಕ್ಕೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಸಂಕಲ್ಪವು ಸಂಬಂಧಪಟ್ಟವರಲ್ಲಿ ಮೂಡಬೇಕು.

ಶಿಕ್ಷಣದಲ್ಲಿ ಕನ್ನಡಕ್ಕೆ ಪ್ರಾಧಾನ್ಯವಿಲ್ಲದಿದ್ದರೆ ಕನ್ನಡವು ಖಂಡಿತವಾಗಿಯೂ ಶೀಘ್ರದಲ್ಲೇ ಅವಸಾನಗೊಳ್ಳುತ್ತದೆ. ಕನ್ನಡಕ್ಕೆ ಸಂಬಂಧಿಸಿದ ಇಲಾಖೆಗಳು, ಪ್ರಾಧಿಕಾರಗಳು, ಕನ್ನಡ ಸಾಹಿತ್ಯ ಪರಿಷತ್ತು, ಅಕಾಡಮಿಗಳು, ಕನ್ನಡ ವಿಶ್ವವಿದ್ಯಾನಿಲಯ, ವಿವಿಧ ಸಂಘ ಸಂಸ್ಥೆಗಳು, ಅದ್ಧೂರಿಯ ಸಾಹಿತ್ಯ ಸಮ್ಮೇಳನಗಳು, ರಾಜ್ಯೋತ್ಸವಗಳು, ವಿವಿಧ ಪ್ರಶಸ್ತಿಗಳು ಯಾವುವೂ ಕನ್ನಡವನ್ನು ಉಳಿಸಲಾಗದೆ ನಿರುಪಯೋಗಿಯಾಗಿ ರಾಜ್ಯ ಸರಕಾರದ ಬೊಕ್ಕಸಕ್ಕೆ ಹಾಗೂ ಜನತೆಗೆ ಹೊರೆಯಾಗಿ ಉಳಿಯುತ್ತವೆ ಅಷ್ಟೆ.

**ಒಟ್ಟಿನಲ್ಲಿ ಕನ್ನಡದ ಮಕ್ಕಳು ಕನ್ನಡದಿಂದ ದೂರವಾಗುತ್ತಿದ್ದಾರೆ, ಅವರ ಬೌದ್ಧಿಕ ಮಟ್ಟ ಕಡಮೆಯಾಗುವ ಸಾಧ್ಯತೆಗಳು ಹೆಚ್ಚುತ್ತಿವೆ. ಕರ್ನಾಟಕದಲ್ಲೇ ಕನ್ನಡ ಮರೆಯಾಗುತ್ತಿದೆ. ಯಾರಿಗೆ ಈ ಸಮಸ್ಯೆಗಳು ಬೇಕು? ಯಾರು ಈ ಸಮಸ್ಯೆಗಳನ್ನು ಪರಿಹರಿಸುತ್ತಾರೆ? ಇದೇ ಈಗಿನ ಯಕ್ಷಪ್ರಶ್ನೆ.**



# "ಜಾನಪದ ಮತ್ತು ಅಂತರ್‌ಶಿಸ್ತೀಯ ಸಂಶೋಧನೆ: ಕೆಲವು ನೋಟಗಳು"

• ಡಾ. ಎಸ್.ಲಕ್ಷ್ಮೀದೇವಿ

**ಭಾ**ರತೀಯ ಸಂಸ್ಕೃತಿಯ ತಾಯಿ ಬೇರು ದ್ರಾವಿಡ ಸಂಸ್ಕೃತಿ. ಈ ಹಿಂದೆ ಅವಿಭಕ್ತ ಕುಟುಂಬಗಳು ನೆಲೆನಿಂತಾಗ ಸಂಘಟಿತ ಸ್ಥಿತಿಯಲ್ಲಿದ್ದ ಜನಪದ ತಾಯಿ ಬೇರಿನ ಸಂಸ್ಕೃತಿ. ಇಂದು ಸಮಾಜ ಅನೇಕ ಕಾರಣಗಳಿಗಾಗಿ 'ಛಿದ್ರಗೊಂಡ' ಸಂದರ್ಭದಲ್ಲಿ ಹಾಗೂ ನಗರೀಕರಣ ತಲೆದೋರಿದ ಇಂದಿನ ಸಮಾಜದಲ್ಲಿ ಗ್ರಾಮ ಮತ್ತು ಶಿಷ್ಟ ಎಂಬ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಗುರುತಿಸಿ ಕೊಳ್ಳುತ್ತಿವೆ. ವಿಷಾದದ ಸಂಗತಿ ಎಂದರೆ ಗ್ರಾಮ ಅಥವಾ ಜನಪದ ಸಂಸ್ಕೃತಿಯನ್ನು ಹೊರತು ಪಡಿಸಿ ಅಥವಾ ಹತ್ತಿಕ್ಕಿ ಶಿಷ್ಟ ಸಮಾಜ ತನ್ನ ಸ್ವಂತ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದು ಅಸಾಧ್ಯ. ಆದರೆ ಇಂದು ಗ್ರಾಮ ಮತ್ತು ಶಿಷ್ಟ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ತಲೆದೋರುತ್ತಿರುವಂತಹ ಈ ಕಲ್ಪನೆಯು ಅನೇಕ ಗಾಢವಾದ ಚಿಂತನೆಗಳಿಗೆ ನಮ್ಮನ್ನು ಒಳಗುಮಾಡಿದೆ.

ಗ್ರಾಮ ಅಥವಾ ಜನಪದ ಸಂಸ್ಕೃತಿಯನ್ನು ಅಸ್ಪೃಶ್ಯ ರೀತಿಯಲ್ಲಿ ಕಾಣುವ ಪರಿ ಇಂದಿನ ಯುವ ಪೀಳಿಗೆಯಲ್ಲಿ ತಲೆದೋರಿದೆ. ಯಾವುದಕ್ಕೂ ಬೇಡದ, ಪರಿಗಣಿಸಲು ಸಾಧ್ಯವೇ ಇಲ್ಲದ ಒಂದು ಶಾಖೆಯಾಗಿ ಇದನ್ನು ಕೆಲವರು ಅಲ್ಲಗಳೆಯುತ್ತಿದ್ದಾರೆ. ಆಧುನಿಕ ಗ್ರಹಿಕೆಗೆ ಇದು ಸಿಗುತ್ತಿಲ್ಲ; ಆಳವಾದ ಪರಿಶೋಧನೆಯ ಹೊರತು ಇದನ್ನು ಸಂಪೂರ್ಣವಾಗಿ ಅರಿಯಲು ಬರುವುದಿಲ್ಲ. ಇಂದಿನ ಪೀಳಿಗೆ ಎಲ್ಲವನ್ನು ಸಿದ್ಧವಸ್ತು ಪ್ರಮಾಣದಲ್ಲಿ ಕಾಣಬೇಕೆನ್ನುವ ರೀತಿಯಲ್ಲಿ ಇದನ್ನೂ ಕಂಡರೆ ಅವರ ಕೈಗೆ ಎಟುಕಲಾರದ ಹಣ್ಣಾಗಿ, ಎಟುಕದ ಹಣ್ಣು ಹುಳಿ

ಎಂಬ ಮಾತಿನಂತೆ ಆಗಿದೆ. 'ಹಿತ್ತಲಗಿಡ ಮದ್ದಲ್ಲ' ಎಂಬಂತೆ ಗಂಭೀರವಾಗಿ ಇದನ್ನು ಗ್ರಹಿಸದೆ, ಪರಿಗಣಿಸದೆ ಹೋಗುವ ಸ್ಥಿತಿ ಇದೆ. ಆದರೆ ಈ ಸ್ಥಿತಿಯಿಂದ ಒಂದು ಹಜ್ಜೆ ಮುಂದೆ ಹೋಗಿ ನೋಡಿದರೆ ನಮಗೆ ಅರಿವಾಗುವ ವಾಸ್ತವ ಸತ್ಯವೇ ಬೇರೆ. ಜನಪದ ಕೇವಲ ಜನಪದವಾಗಿ ಉಳಿಯದೆ ಅದು ತನ್ನ ಪಳೆಯುಳಿಕೆಯ ಸ್ಥಿತಿಯಿಂದ ಬಹುಪಾಲು ಇತರ ಸ್ಥಿತಿಗಳಿಗೆ ಮಾರ್ಪಾಟು ಹೊಂದಿದೆ. ಇಂದು ಅದು ಪ್ರಸ್ತುತವೂ ತೀರಾ ಅವಶ್ಯಕವೂ ಆಗಿರುವುದು ಗೋಚರಿಸುತ್ತಿದೆ.

'ಜನಪದ ಸಂಸ್ಕೃತಿ ಎಂಬುದು ನಾವು ನಮ್ಮ ಬದುಕಿನಲ್ಲಿ ಯಾವ ಸಾಮುದಾಯಿಕ ಬದುಕಿನ ಸಂವೇದನೆಯನ್ನು ಕಳೆದುಕೊಂಡಿದ್ದೇವೆಯೋ ಅಂಥ ಸಂವೇದನೆಯೇ ಆಗಿದೆ. ಅಂಥದ್ದನ್ನು ಅರಿಯುವುದು ಮಾತ್ರವಲ್ಲ, ಅದನ್ನು ಮತ್ತೆ ನಮ್ಮ ಬದುಕಿನ ಭಾಗವಾಗಿ ರೂಢಿಸಿಕೊಳ್ಳುವುದು ಈಗ ತೀವ್ರವಾದ ಅವಶ್ಯಕತೆಯಾಗಿದೆ'[೨]

ಇತ್ತೀಚೆಗೆ ಪ್ರಧಾನ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿ, ಲಿಖಿತ ಮತ್ತು ಮೌಖಿಕ ಅಥವಾ ಅಲಿಖಿತ, ಅಧಿಕೃತ ಬರೆಹ ಮತ್ತು ಅನಧಿಕೃತ ಪರಂಪರೆ ಹೀಗೆ ಜನಪದಕ್ಕೆ ಮತ್ತು ಶಿಷ್ಟಕ್ಕೆ ಸಂಬಂಧಿಸಿದಂತಹ ಪರಿಕಲ್ಪನೆಗಳನ್ನು ವಿದ್ವಾಂಸರು ಇಲ್ಲಿ ಗುರುತಿಸಿದ್ದಾರೆ. ನಗರ ಜನಪದ ಅಥವಾ ಶಿಷ್ಟ ಜನಪದ ಇಲ್ಲವೇ ಗ್ರಾಮ್ಯ ಮತ್ತು ಶಿಷ್ಟ ಎಂಬುದೇ ತಪ್ಪು ಎನ್ನುವುದು ಕೇವಲ ಸಂಶೋಧನೆಯಿಂದಷ್ಟೇ ಅರಿಯಬಹುದಾದ ನಗ್ನ ಸತ್ಯ.

ದ್ರಾವಿಡ ಭಾಷಾ ಕುಟುಂಬದಲ್ಲಿ ಹಾಗೂ ಹಲವಾರು ಗಿರಿಜನರ ಪರಂಪರೆ ಮತ್ತು ನಾಗರೀಕತೆಗಳಲ್ಲಿ ಸಜೀವವಾಗಿ ಅಡಗಿರುವ ಈ ಜಾನಪದ ಸಂಪತ್ತು ಮತ್ತು ಕೇವಲ ಅದರ ಮಣ್ಣಿನ ಸೊಗಡಿನ ಜೊತೆಗೆ ಅಂಟದ ಸಂಬಂಧವನ್ನು ಮಾತ್ರ ಜನಪದ ತಜ್ಞರು ಹೊರ ಹಾಕುತ್ತಿದ್ದಾರೆ. ಒಂದು ವಿಷಯವನ್ನು ಸಮಗ್ರವಾಗಿ ಅರಿತುಕೊಳ್ಳಲು ಅದರ ಒಳನೋಟ ದೊಂದಿಗೆ ಎಂದರೆ ಅದರ ಬೇರಿನ ಸೊಗಡಿನೊಂದಿಗೆ ಅದರ ಹೊರ ನೋಟವೂ ಅಂದರೆ ಆ ಸೊಗಡು ಪ್ರಸರಿಸಿದ ಎಲ್ಲಾ ಭಾಗಗಳನ್ನೂ ಹೊಕ್ಕಿ ಸಂಶೋಧಿಸಿ, ಅದು ಆ ಪರಿಸರದಲ್ಲಿ ಹೇಗೆ ಒಗ್ಗಿಹೋಗಿದೆ ಎಂಬುದನ್ನು ಒರೆಗೆ ಹಚ್ಚಿ ನೋಡಬೇಕು. ಒಗ್ಗಿಹೋದ ಹಾಗೂ ಒಗ್ಗದ ನೆಲೆಗಳನ್ನು ಪತ್ತೆ ಹಚ್ಚಿ ಕಾರ್ಯಕಾರಣ ಸಂಬಂಧವನ್ನು ಹುಡುಕಿ ಅದನ್ನು ಸರಿಯಾದ ಹಿನ್ನೆಲೆಯನ್ನು ಯಾವ ಭಾವೋದ್ವೇಗಕ್ಕೂ ಒಳಗಾಗದೆ ಪೂರ್ವಾಗ್ರಹಪೀಡಿತರಾಗದೆ ವಿಮರ್ಶಿಸಬೇಕು. ಈ ವಿಮರ್ಶೆಯ ಕೆಲಸ ಕೇವಲ ಆ ಜನಪದ ಸಂಸ್ಕೃತಿಯನ್ನು ತನ್ನೊಳಗೆ ಬೆಸೆದುಕೊಂಡಿರುವ ಇತರ ಸಂಸ್ಕೃತಿಗಳು ಅಥವಾ ಶಿಷ್ಟ ಸಮಾಜದ ಓರೆ ಕೋರೆಗಳನ್ನು ತಿದ್ದುವ ಪ್ರಯತ್ನಕ್ಕಲ್ಲ. ಆ ಶಿಷ್ಟ ಸಮಾಜವು ಒಂದು ಕಾಲದಲ್ಲಿ ಇದೇ ಜನಪದ ಬೇರಿನಿಂದ ಚಿಗುರೊಡೆದದ್ದೇ ಎಂಬುದನ್ನು ತಿಳಿಸುವ ಸಲುವಾಗಿ ಹಾಗೂ ಎರಡರ ನಡುವೆಯೂ ಅವಿನಾಭಾವದ ಸಂಬಂಧವಿದೆ ಎಂಬುದನ್ನು ಎತ್ತಿ ತೋರಿಸುವ ಪ್ರಯತ್ನಕ್ಕಾಗಿ ಆಗಬೇಕಾಗಿದೆ. ಇಂತಹ ಗುರುತರವಾದ ಕೆಲಸವನ್ನು ಇಂದು ಜನಪದ ಶಾಖೆಯ ಜೊತೆಗೆ ಸಂಬಂಧ ಕಲ್ಪಿಸಿಕೊಂಡಿರುವ ಇತರ ಶಾಖೆಗಳೂ ನಡೆಸಬೇಕಾಗಿದೆ. ಈ ಎರಡರ ನಡುವೆ ತೌಲನಿಕ ಅಧ್ಯಯನಗಳು ನಡೆಯಬೇಕಾದದ್ದು ಬಹಳಷ್ಟಿದೆ.

ಉದಾಹರಣೆಗೆ ಜಾನಪದದೊಂದಿಗೆ, ಮನಃಶಾಸ್ತ್ರ, ಮಾನವಶಾಸ್ತ್ರ, ಭಾಷಾಶಾಸ್ತ್ರ, ಸಮಾಜಶಾಸ್ತ್ರ, ತತ್ವಶಾಸ್ತ್ರ, ಇತಿಹಾಸ ಮತ್ತು 'ಸಂಸ್ಕೃತಿ'ಯ[೩] ಬಗ್ಗೆ ತಕ್ಕಮಟ್ಟಿಗೆ ಅರಿಪಿರಬೇಕು. ಇವೆಲ್ಲವೂ ಒಂದಕ್ಕೊಂದು ಪೂರಕವೂ ಹಾಗೂ ಪ್ರೇರಕವೂ ಆದ ಪ್ರಧಾನವಾದ ಶಾಖೆಗಳು. ಇವು ಸಮೂಹ ಸಂಸ್ಕೃತಿಯ ಸಂವಹನ ಪ್ರಕ್ರಿಯೆಯಾಗಿ ರೂಪುಗೊಂಡು ಒಂದು ತಾತ್ವಿಕ ಚೌಕಟ್ಟಿಗೆ ಒಳಪಟ್ಟಿದೆ. ಈ ತಾತ್ವಿಕ ಚೌಕಟ್ಟನ್ನು ತೌಲನಿಕವಾಗಿ ಅಭ್ಯಸಿಸಿದಾಗ ಅದರ ಸಂಪೂರ್ಣತೆಯ ಅರಿವು ಉಂಟಾಗುತ್ತದೆ ಮತ್ತು ಇದರ ನಡುವೆ ಇರುವ ತಾರತಮ್ಯ ಸ್ವಲ್ಪ ಮಟ್ಟಿಗೆ ಸರಿಹೋಗುವ ಸಾಧ್ಯತೆಗಳಿವೆ. ಇಂದು ಜನಪದ ಒಂದು ಉದ್ಯಮವಾಗಿ ರೂಪುಗೊಳ್ಳಬೇಕಾದ ಅವಶ್ಯಕತೆ ಇದೆ. ಇಂದು ಕಾಲ ಬದಲಾಗುತ್ತಿದೆ. ಜನಪದದಲ್ಲಿ ಈ ಹಿಂದೆ ಇದ್ದ ಏಕತಾನತೆಗಳು ಮುರಿದು ಹೊಸ ಬಗೆಯ ಸಂಶೋಧನೆಗಳು, ವಿಮರ್ಶೆಗಳು, ತೌಲನಿಕ ಸಾಹಿತ್ಯ ಪ್ರಕಾರಗಳು ಹೊರಬರಬೇಕಾದ ಅವಶ್ಯಕತೆ ಹಿಂದೆಂದಿಗಿಂತಾ ಇಂದು ಪ್ರಮುಖವಾಗಿದೆ. ಇಂದಿನ ಶಿಕ್ಷಣ ಕ್ಷೇತ್ರದಲ್ಲಿ ಪ್ರಮುಖವಾಗಿ ತೌಲನಿಕ ಅಧ್ಯಯನ ಕ್ರಮಗಳು ಹಾಗೂ ಅನುವಾದ ಅಂದರೆ ಭಾಷಾಂತರ ಪ್ರಕ್ರಿಯೆಗಳು ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಿದ್ದು ಈ ನಿಟ್ಟಿನಲ್ಲಿ ಜಾನಪದವನ್ನು ತೊಡಗಿಸುವ ಅವಶ್ಯಕತೆ ನಮಗೆ ಹೆಚ್ಚಾಗಿದೆ. ಹೊಸ ಬಗೆಯ ದೃಷ್ಟಿಕೋನದಿಂದ ಪುರಾತನ ವಿಷಯಗಳನ್ನು ಪರೀಕ್ಷಿಸುವ ಹಾಗೂ ಅದರ ಮೌಲ್ಯಗಳನ್ನು ತಲೆಮಾರಿನಿಂದ ತಲೆಮಾರಿಗೆ ರವಾನಿಸುವ ಕೆಲಸ ನಡೆಸಬೇಕಾಗಿದೆ. ಇಂದು ಶಿಕ್ಷಣವು ಮಾರುಕಟ್ಟೆಯಾಗುತ್ತಿರುವುದರಿಂದ ಈ ಮಾರುಕಟ್ಟೆಯಲ್ಲಿ ನಮ್ಮ ವಸ್ತುಗಳು ಮೌಲ್ಯಾಧಾರಿತ ರೀತಿಯಲ್ಲಿ ಬಿಕರಿಗೊಳ್ಳುವುದನ್ನು ನಾವು ಎದುರು ನೋಡಬೇಕಾಗಿದೆ. ಸ್ಪರ್ಧಾತ್ಮಕ ಮನೋಭಾವ ಇಂತಹ ಬರೆವಣಿಗೆಯನ್ನು ಇನ್ನಷ್ಟೂ ಸ್ಫುಟಗೊಳಿಸಿ ಹೊಳೆಯಲು ಸಹಾಯಕವಾಗುವಂತೆ ಮಾಡುತ್ತಿದೆ ಎನ್ನಬಹುದೇನೋ.

ಇಂದು ಪ್ರತಿಯೊಂದು ವಿಷಯವನ್ನೂ ವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಿಸುವ ಅವಶ್ಯಕತೆ ಹೆಚ್ಚಾಗಿದೆ. ಹಾಗೂ ಇಂದಿನ ನವನಾಗರೀಕತೆಯಲ್ಲಿ ತನ್ನ ಔಚಿತ್ಯ ಪ್ರಜ್ಞೆಯನ್ನು ಕಾಯ್ದುಕೊಳ್ಳುವ ಅವಶ್ಯಕತೆ ಜನಪದಶಾಸ್ತ್ರಕ್ಕೆ ಒದಗಿ ಬಂದಿದೆ. ಇದಕ್ಕೆ ಸಂಬಂಧಿಸಿದಂತೆ ಹಿರಿಯ ಜನಪದ ತಜ್ಞರೊಂದಿಗೆ ಕಿರಿಯ ಜನಪದತಜ್ಞರೂ ಕುಳಿತು ಚರ್ಚೆ ನಡೆಸಿದಾಗ ಅಂದರೆ ಕಮ್ಮಟ ಅಥವಾ ಸಮ್ಮೇಳನವನ್ನು ನಡೆಸಿದಾಗ ಇದಕ್ಕೆ ಸಂಬಂಧಿಸಿದಂತಹ ಕೆಲವು ವಿಷಯಗಳು ಹೊರಬರಬಹುದು. ಜೊತೆಗೆ ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಲು ಇಚ್ಛಿಸುವ ಇಂದಿನ ಹೊಸ ಪೀಳಿಗೆಗೆ ಹೊಸ ದೃಷ್ಟಿಕೋನಗಳನ್ನು ನೀಡಲು ಹಾಗೂ ಹೊಸ ಆಯಾಮಗಳ ಕಡೆಗೆ ಹೇಗೆ ಮುಖಮಾಡಬೇಕೆಂಬುದನ್ನು ಚಿಂತಿಸಲು ಅನುವು ಮಾಡಿಕೊಟ್ಟ ಹಾಗೆ ಆಗುವುದು. ಯಾವುದಕ್ಕೇ ಆಗಲಿ ಸಿದ್ಧತೆ ಮುಖ್ಯ. ಪೂರ್ವಭಾವಿ ಸಿದ್ಧತೆಗಳಿಲ್ಲದೆ ಯಾವ ಫಲಿತವೂ ಸಂಪೂರ್ಣವಾಗಿ ಬಯಸಲಾಗದು. ಇಂದಿನ ಸಂಶೋಧನೆಗೆ ತಂತ್ರಜ್ಞಾನದ ಬಳಕೆ ಅತ್ಯಗತ್ಯ. ಚಿತ್ರ, ಗ್ರಾಫಿಕ್ಸ್, ವಿಡಿಯೋ, ಆಡಿಯೋ ಮುಂತಾದವುಗಳ ಸಹಾಯದಿಂದ ಹೊಸ ಆಯಾಮದ ಕಡೆಗೆ ಹೊಸ ಮಗ್ಗುಲಿನ ಎಡೆಗೆ ಜಾನಪದ 'ಸಂಶೋಧನೆ'[೪] ಸಾಗಬೇಕಾಗಿದೆ.

ಯಾವುದೇ ವಿಷಯಗಳಿಗೂ ತನ್ನದೇ ಆದ ಆಯಾಮಗಳ ಜೊತೆಗೆ ತನ್ನದೇ ಆದ

ಪರಂಪರೆ ಮತ್ತು ಹಿನ್ನೆಲೆಗಳಿವೆ. ಇವು ಯಾವುದೇ ಶಕ್ತಿಯ ಹಿಡಿತಕ್ಕೆ ಒಳಗಾಗಬಾರದು. ಯಾವುದೇ ಸಂಘಟನೆ, ಧರ್ಮ, ಜಾತಿ, ನಂಬಿಕೆ, ವಿಧಿ, ನಿಷೇಧ ಇದರ ಮೇಲೆ ತನ್ನ ಒತ್ತಡವನ್ನು ಹೇರಬಾರದು. ಒಂದು ಸಮಾಜದ ಹಿತದೃಷ್ಟಿಯಿಂದ ಸಾಮೂಹಿಕ ಜಾಗ್ರತೆಯನ್ನು ಬೆಳೆಸಿಕೊಂಡು ಮುನ್ನಡೆಯಬೇಕು. ಮೂಲ ವಸ್ತುವನ್ನು ಹಾಗೂ ಅದರ ಭಾಷೆಯನ್ನು ಜತನದಿಂದ ಚಿಂತಿಸಿ ಅದರ ಆಳ ಹರವು ಅರಿತು ಅದನ್ನು ಉತ್ತಮವಾದ ಶೈಲಿಯಲ್ಲಿ ನಿರೂಪಿಸಿ, ತನ್ನದೇ ಆದ ತಾತ್ವಿಕ ಮೂಸೆಯಲ್ಲಿ ಅದನ್ನು ಒರೆಹಚ್ಚಿ ನೋಡಬೇಕು. ಹೀಗೆ ಮಾಡುವಾಗ ಹೊಸ ಸಾಧ್ಯತೆಗಳ ಕಡೆಗೂ ಗಮನ ಹರಿಸಬೇಕು. ಜಾಗತೀಕರಣದ ಪರಿಣಾಮಗಳಿಂದ ವಸ್ತು ಮತ್ತು ಚಿಂತನೆಯಲ್ಲಿ ಆಗುತ್ತಿರುವ ಬದಲಾವಣೆಯನ್ನು ಪರಿಗಣಿಸಿ ಅದನ್ನು ದಾಖಲಿಸಬೇಕು. ಬರೆವಣಿಗೆಯಲ್ಲಿ ಹೊಸತನ ತುಂಬಿರಬೇಕು.

ಮೂಲ ಸಾಮಗ್ರಿಯ ಸಮಗ್ರ ಅರಿವು ಇತರೆ ಶಾಖೆಗಳ ಜ್ಞಾನ, ವೈಚಾರಿಕ ವಿವೇಚನೆ, ವೈಜ್ಞಾನಿಕ ದೃಷ್ಟಿಕೋನ ಎಲ್ಲವನ್ನೂ ಇದು ಒಳಗೊಂಡಿರಬೇಕು. ಶ್ರದ್ಧೆ, ದಕ್ಷತೆ ಮತ್ತು ತಾಳ್ಮೆಯ ಜೊತೆಗೆ ವಾಸ್ತವ ಚಿತ್ರಣದ ಆಳ ಮತ್ತು ಅರಿವು ಇಲ್ಲಿ ಪ್ರಮುಖವಾದದ್ದು.

ಸಂಶೋಧಕನು ತಾನು ಒಂದು ಹಂತದಲ್ಲಿ ಶೇಖರಿಸಿದ್ದನ್ನು ಸೈದ್ಧಾಂತಿಕ ವಿವೇಚನೆಗೆ ಅಳವಡಿಸಿ ಅದನ್ನು ಪುನಃ ಸಮರ್ಪಿಸುವಾಗ ಆಳವಾಗಿ ಅದನ್ನು ಪರಿಶೀಲಿಸಬೇಕು. ಈ ಹಿಂದೆ ನಡೆದ ಸಂಶೋಧನೆಗಳು ಏನನ್ನು ಹೇಳುತ್ತಿವೆ ಹಾಗೂ ತಾನು ಇಲ್ಲಿ ಹೊಸದಾದ ಯಾವ ಅಂಶವನ್ನು ಹೇಳಹೊರಟಿದ್ದಾನೆ ಮತ್ತು ಅದು ಎಷ್ಟು ಪ್ರಸ್ತುತ ಇವುಗಳ ಅರಿವಿರಬೇಕು, ಜೊತೆಗೆ ಈ ಕ್ಷೇತ್ರದಲ್ಲಿ ಭವಿಷ್ಯದಲ್ಲಿ ಗುರುತಿಸಬಹುದಾದ ಅಂಶಗಳ ಕಡೆಗೆ ಜತನವಾಗಿ ಗಮನ ಹರಿಸಿ ಅವುಗಳನ್ನು ಸೂಚಿಸಬೇಕು. ಇಲ್ಲವೇ ವಿದ್ವತ್ ಲೋಕಕ್ಕೆ ಒಂದು ಪ್ರಶ್ನೆಯೋಪಾದಿಯಲ್ಲಿ ಅದನ್ನು ತೆರೆದಿಟ್ಟು ಅದರ ಮಹತ್ವವನ್ನು ಚರ್ಚೆಗೆ ಒಳಪಡಿಸಬೇಕು. ಇತರೆ ಕೋಶಗಳಿಗೆ ಜಾನಪದ ಪದಕೋಶಗಳನ್ನು ಹೋಲಿಸಿ ನೋಡಿದಾಗ ಬಹಳಷ್ಟು ಕಡಮೆ ಪ್ರಮಾಣದಲ್ಲಿ ಲಭ್ಯವಿದೆ. ಅದರಲ್ಲೂ ಒಂದು ಪ್ರಾದೇಶಿಕ ಪರಿಸರದಲ್ಲಿ ಬಳಸುವ ಪದಗಳನ್ನು ಇನ್ನೊಂದು ಪ್ರದೇಶದಲ್ಲಿ ಬಳಸುವುದು ಅಪರೂಪ. ಅವು ಪ್ರಾದೇಶಿಕವಾಗಿ ಅನೇಕ ಅರ್ಥಗಳನ್ನು ಕೊಡುತ್ತವೆ. ಭಿನ್ನಭಿನ್ನ ಸಂದರ್ಭದಲ್ಲಿ ವಿವಿಧ ಬಗೆಯ ವೈವಿಧ್ಯಗಳನ್ನು ಹೊರಹೊಮ್ಮಿಸುತ್ತವೆ. ಅಂತಹ ಪದಗಳನ್ನು ಒಟ್ಟಿಗೆ ಸೇರಿಸುವ ಕೆಲಸ ಇನ್ನೂ ಬಹಳಷ್ಟು ಆಗಬೇಕಿದೆ. ವಿದ್ವಾಂಸರು ತಮಗೆ ಸಂಬಂಧಿಸಿದ ಕ್ಷೇತ್ರದಲ್ಲಿ ಕೆಲಸ ಮಾಡುವಾಗ ಅದರ ಪಾರಿಭಾಷಿಕ ಪದಗಳ ಕಡೆಗೆ ಗಮನ ಹರಿಸುವುದುಂಟು. ಅವುಗಳನ್ನು ಇನ್ನಷ್ಟು ಆಳವಾಗಿ ಗಮನಿಸಿದರೆ ಒಂದು ದೊಡ್ಡ ಖಜಾನೆಯೇ ತೆರೆದುಕೊಳ್ಳುವ ಸಾಧ್ಯತೆಗಳಿವೆ. ಅದರಲ್ಲೂ ಅನೇಕ ಭಾಷೆಗಳು ಒಂದು ಪ್ರದೇಶದಲ್ಲಿ ನೆಲೆನಿಂತಾಗ ಅದನ್ನು ಗಮನಿಸಿ ಬೇಕಾದುದನ್ನು ಹೆಕ್ಕಿ ತೆಗೆಯಬಹುದು. ಉದಾ:- ಕೋಲಾರ, ಇದು ಎರಡು ಭಾಷೆಗಳ ಸಂಗಮ ಸ್ಥಾನ, ಕುಪ್ಪಂ, ಕೆ.ಜಿ.ಎಫ್ ಇವು ಮೂರು ಭಾಷೆಗಳ ಸಂಗಮ ಸ್ಥಾನ. ಇಲ್ಲಿ ಬಳಸಲ್ಪಡುವ ತೆಲುಗು ಮತ್ತು ತಮಿಳು ಮಿಶ್ರಿತ ಕನ್ನಡ ಪದಗಳು ಈಗಾಗಲೇ ಜೀರ್ಣಾವಸ್ಥೆಯನ್ನು ಕಾಣುತ್ತಿವೆ. ಹಾಗೆಯೇ ಎರಡು ಮೂರು ಭಾಷೆಗಳನ್ನು ತನ್ನೊಳಗೆ ಸೇರಿಸಿಕೊಂಡು ತನ್ನದೇ ಆದ ವಿಶಿಷ್ಟ ಬಗೆಯ ಪದಗಳನ್ನು ಭಾಷಾ ಶಾಸ್ತ್ರಕ್ಕೆ ನೀಡುತ್ತಿರುವ

ಇಂಥ ಅನೇಕ ಪ್ರದೇಶಗಳನ್ನು ಈ ಪ್ರಯೋಗಕ್ಕೆ ಒಳಪಡಿಸಬಹುದು. ಇದನ್ನು ಕೂಡಲೇ ಕೈಗೊಳ್ಳದಿದ್ದರೆ ನಮ್ಮ ಮುಂದಿನ ಪೀಳಿಗೆಗೆ ಇಂಥ ಪ್ರದೇಶಗಳಲ್ಲಿ ಬಳಕೆಯಾಗುವ ವಿಶಿಷ್ಟ ಪದಗಳೇ ಪರಿಚಯವಿಲ್ಲದೆ ಹೋಗುವ ಸಂಭವವಿದೆ. ಭಾಷೆ ನಿಂತ ನೀರಲ್ಲ, ಹರಿಯುವ ಸಾಮರ್ಥ್ಯವಿರುವ ಇದು ತನ್ನೊಳಗೆ ಇತರ ಅನೇಕ ಭಾಷೆಗಳ ಪದಗಳನ್ನು ಸೇರಿಸಿಕೊಂಡು ಬೃಹದಾಕಾರವಾಗಿ ಬೆಳೆಯುತ್ತಾ ಹೋಗುತ್ತಿದೆ. ಇದು ಅದರ ಜೀವಂತಿಕೆಗೆ ಸಾಕ್ಷಿಯೂ ಹೌದು. ಈ ಮೂಲಕ ಮಾನವನ ಮಾನಸಿಕ ಸ್ಥಿತಿಗತಿಗಳ ಕಡೆಗೂ ಬೆಳಕನ್ನು ಚೆಲ್ಲಬಹುದು. ನಿತ್ಯ ಪರಿವರ್ತನೆಗಳಿಗೆ ಮತ್ತು ಹೊಸತನಕ್ಕೆ ಆಶಿಸುವ ಮಾನವನ ಚಿಂತನಾಶೀಲ ಬದುಕಿಗೆ ಇದೊಂದು ಕನ್ನಡಿ ಇದ್ದಂತೆ. ಹೀಗೆ ಜಾನಪದವನ್ನು ಇತರ ಶಾಖೆಗಳೊಂದಿಗೆ ಸೇರಿಸಿ ಮತ್ತು ಪ್ರತ್ಯೇಕಿಸಿ ನೋಡಿದಾಗ ಅದರ ಬೆಳೆವಣಿಗೆಯನ್ನು ನಾವು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಬಹುದು. ಈ ಕೆಲಸವನ್ನು ಕೈಗೊಂಡಾಗ ಯಾವ ಶಾಖೆಯ ಬಗ್ಗೆಯಾಗಲೀ ವಿಶೇಷವಾದ ಒಲವನ್ನು ತೋರದೆ ಸಮನ್ವಯಭಾವದಿಂದ ಎಲ್ಲವನ್ನೂ ಕಾಣಬೇಕು. ಈ ಸಮನ್ವಯ ದೃಷ್ಟಿಯೇ ಮುಂದೆ ಅದು ದೊಡ್ಡದಾಗಿ ಬೆಳೆದು ಹೆಮ್ಮರವಾಗಿ ಇತರರಿಗೆ ನೆರಳು ನೀಡುವ ದೊಡ್ಡ ವೃಕ್ಷವಾಗಲು ಕಾರಣವಾಗುತ್ತದೆ. ಇಂದು ದೇಶ ಭಾಷೆಗಳ ನಡುವೆ ನಡೆಯುತ್ತಿರುವ ವೈಮನಸ್ಯ ಮತ್ತು ಕಲಹಗಳನ್ನು ಬದಿಗಿಟ್ಟು ಈ ಕೆಲಸ ಕೈಗೊಂಡರೆ ನಾವು ಇಡಿಯಾಗಿ ಒಂದು ಎನ್ನುವ ರಾಷ್ಟ್ರೀಯ ಪ್ರಜ್ಞೆಗೆ ಸ್ವಲ್ಪ ಮಟ್ಟಿನ ಕೊಡುಗೆಯನ್ನು ನೀಡಿದಂತಾಗಬಹುದು. ಜನಪದ ಕಥೆಯಲ್ಲಿ ಬರುವ ಕಥೆ ಮತ್ತು ಪುರಾಣಗಳಲ್ಲಿ ಇರುವ ಇತಿಹಾಸವನ್ನು ಮತ್ತು ಚರಿತ್ರೆಯನ್ನು ಒರೆಗೆ ಹಚ್ಚಿ ನೋಡಿದಾಗ ನಮಗೆ ಲಭಿಸುವ ವಿಶೇಷ ಅಂಶಗಳನ್ನು ಹೆಕ್ಕಿ ಅದನ್ನು ಈ ಮೂಲಕ ಮುಂದಿನವರಿಗೆ ನೀಡಬಹುದು. ಒಂದು ಭಾವೈಕ್ಯದ ಸಮರಸದ ಜೀವನಕ್ಕೆ ಈ ಬಗೆಯ ಶೋಧ ಹೊಸ ಹಾದಿಯನ್ನು ಹಾಕಬಹುದು, ಹೀಗೆ ಅಂತರ್‌ಶಾಸ್ತ್ರೀಯ ಅಧ್ಯಯನದಿಂದ ಮಾಡಿದ ಸುವ್ಯವಸ್ಥಿತ ಮಾಹಿತಿ ಸಂಗ್ರಹ ಸಂಶೋಧನೆಯೆಂಬ 'ಪವಿತ್ರರಥ'[೩] ವನ್ನು ಮುನ್ನಡೆಸಲು ಸಹಕಾರಿಯಾಗಬಹುದು.

**ಅಡಿ ಟಿಪ್ಪಣಿಗಳು:**

೧. ಸಮುದಾಯವೆನ್ನುವ ಜೀವಕ್ರಮವು ಛಿದ್ರಗೊಂಡ ವಾತಾವರಣದಲ್ಲಿ ನಾವು ಈಗ ಬದುಕುತ್ತಿದ್ದೇವೆ. ಸಮುದಾಯವನ್ನು ಒಡೆದು ಆಳುವ ವಾತಾವರಣ ಈಗ ಜಾಗೃತ ಸ್ಥಿತಿಯಲ್ಲಿದೆ. ವೈಯಕ್ತಿಕತೆ; ವಸ್ತು ಭೋಗದ ಪ್ರಪಂಚ ಇವು ಮನುಷ್ಯನನ್ನು ಇಂದು ಒಂಟಿಯಾಗಿ ಮಾಡಿರುವುದಲ್ಲದೆ, ಆ ಸ್ಥಿತಿಯನ್ನೇ ಮುಖ್ಯವೆಂದು ಭಾವಿಸುವ ಹಾಗೆ ಮಾಡಿವೆ. ಈ ಹಿನ್ನೆಲೆಯ ಮನಸ್ಸು ಜನಪದ ಸಂಸ್ಕೃತಿಯನ್ನು ತನ್ನಿಂದ ಭಿನ್ನವೆಂದೂ, ಪ್ರಸ್ತುತವಲ್ಲವೆಂದೂ ತಿಳಿಯುತ್ತದೆ. *(ಡಾ. ಬಸವರಾಜಕಲ್ಗುಡಿ. "ಜನಪದ ಸಂಸ್ಕೃತಿ–ಗ್ರಹಿಕೆಯ ನೆಲೆಗಳು: ಒಂದು ತಾತ್ವಿಕ ಚಿಂತನೆ: ಪುಟ–೧೦೨ ಸಾಧನೆ, ಸಂಯುಕ್ತ ಸಂಚಿಕೆ ೧೯೯೭–೯೮.)*

೨. ಅದೇ. ಪುಟ ೧೦೪.

೩. ಸಂಸ್ಕೃತಿಯನ್ನು ಅಧ್ಯಯನ ಮಾಡುವ ಸಂಶೋಧನೆಗಳ ಅಧ್ಯಯನ ಕ್ರಮವನ್ನು ನಾಲ್ಕು ಪ್ರಮುಖ ಪಂಥಗಳಾಗಿ ವಿಂಗಡಿಸಬಹುದು. ೦೧. ರಾಚನಿಕ (Structuralist) ೦೨. ಚೋಮ್‌ಸ್ಕಿಯನ್ (Chomskian) ೦೩. ಫರ್ಥಿಯನ್ (Firthian) ೦೪. ಸಂವಹನ ಮತ್ತು ಸಂದೇಶ (Communication and message).

ಯೂರೋಪಿನ ಸ್ಟ್ರಕ್ಚರಲಿಸಂ ನಂತರ ಇಟಲಿಯಲ್ಲಿ ಹುಟ್ಟಿದ ಈ ನಾಲ್ಕನೇ ಪಂಥ ಅಂದರೆ ಸಂವಹನ ಪ್ರಕ್ರಿಯೆ ಮತ್ತು ಸಂದೇಶ ವ್ಯವಸ್ಥೆ ಅಧ್ವರ್ಯು ಈಕೋ (Umberto Eco) ಎಂಬಾತ. ಅವನೇ ಮೊದಲ ಬಾರಿಗೆ ಸಂಸ್ಕೃತಿಯನ್ನು ಒಂದು ಸಂವಹನ ಪ್ರಕ್ರಿಯೆ (Process of Communication) ಎಂದು ವಿವರಿಸಿದನಲ್ಲದೆ, ಈ ಸಾಂಸ್ಕೃತಿಕ ಪ್ರಕ್ರಿಯೆಯ ವಿಶ್ಲೇಷಣೆಯಲ್ಲಿ ಸಿಮಿಯಾಟಿಕ್ಸ್ ತತ್ವವನ್ನು ಆಧರಿಸಿ ಅಂದರೆ analysis through a theory of signification ಮಾಡುವ ಅಗತ್ಯತೆಯನ್ನು ಒತ್ತಿ ಹೇಳಿದೆ. *(ಟಿ.ಎಸ್. ಸತ್ಯನಾಥ್, ಸಂವಹನ ಪ್ರಕ್ರಿಯೆಯಾಗಿ ಸಂಸ್ಕೃತಿ : ಕೆಲವು ಟಿಪ್ಪಣಿಗಳು. ಪುಟ-೦೨, ಅಂಕಣ ಜುಲೈ ೧೯೮೦.)*

೨. ಭೌತಿಕ ಜೈವಿಕ, ಭೌಗೋಳಿಕ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ಸಂಶೋಧನೆ ವೈಜ್ಞಾನಿಕ ಸಂಶೋಧನೆ ಯಾದರೆ, ಭಾಷೆ, ಜನಾಂಗ, ಸಮಾಜ, ಮಾನವಿಕ ಇತಿಹಾಸ ಮುಂತಾದ ಕ್ಷೇತ್ರಗಳಿಗೆ ಸಂಬಂಧಪಟ್ಟ ಸಂಶೋಧನೆ ಶಾಸ್ತ್ರೀಯ ಸಂಶೋಧನೆ. ಈ ಶಾಸ್ತ್ರೀಯ ಸಂಶೋಧನೆಯ ಮತ್ತೊಂದು ಪ್ರಕಾರ ಸಾಹಿತ್ಯ ಸಂಶೋಧನೆ. *(ಡಾ. ಸಂಗಮೇಶ ಸವದತ್ತಿ ಮಠ, ಸಂಶೋಧನಾ ವ್ಯಾಸಂಗ ಪುಟ ೧, ಆಗಸ್ಟ್ ೧೯೮೮.)*

೩. ಇದು ನನ್ನ ಪೂಜ್ಯ ಗುರುಗಳೂ ಮಾರ್ಗದರ್ಶಕರೂ ಆದ ಡಾ. ಸಿ.ಯು ಮಂಜುನಾಥ್‌ರವರ ಪದ. ಸಂಶೋಧನೆಯೆಂಬುದು ಪವಿತ್ರರಥ, ಅದನ್ನು ಈಗಾಗಲೇ ಹಲವರು ಎಳೆದು ಮುನ್ನಡೆಸಿದ್ದಾರೆ. ಸಾಧ್ಯವಾದರೆ ನಾವೂ ಅದನ್ನು ಒಂದು ಹೆಜ್ಜೆ ಮುನ್ನಡೆಸಬೇಕು.



# ಎರಡು ಟಿಪ್ಪಣಿಗಳು

• *ವೆಂಕಟೇಶ ಮೂರ್ತಿ ಜಿ.*

## ೧. ಶಿವನುಟ್ಟ ಸೀರೆ

ಕ್ರಿ.ಶ. ೧೪೧೦ಕ್ಕೆ ಸೇರುವ ಹಂಪಿಯ ಶಾಸನವೊಂದರಲ್ಲಿ ಈ ಕೆಳಗಿನ ಪದ್ಯವಿದೆ[೧]:

ಅವನಿಯನಾಕ್ರಮಿಪುದು ದಾ
ನವಿಚಿತ್ರಂ ಲೋಕವಜೆಯೆ ಶುಚಿಯೆನಿಸಿರ್ದ್ದುಂ
ಶಿವನುಟ್ಟ ಸೀರೆಯಂ ಪಿಡಿ
ದವಗಡಿಪಳ್ಕೀರ್ತ್ತಿ ಲಕ್ಷ್ಮೀಧರನಾ

ಮೊದಲನೆಯ ದೇವರಾಯನ ಮಂತ್ರಿಯಾದ ಲಕ್ಷ್ಮೀಧರನು ಗಣಪತಿಯ ದೇವಾಲಯವನ್ನು ಮಾಡಿಸಿ ಶಾಸನವನ್ನು ಹಾಕಿಸಿದನು. ಆ ಶಾಸನದಲ್ಲಿ ಬರುವ ಲಕ್ಷ್ಮೀಧರನ ವಿಸ್ತಾರವಾದ ಪ್ರಶಸ್ತಿಯಲ್ಲಿ ಈ ಪದ್ಯವೂ ಸೇರಿದೆ. ಇದರಲ್ಲಿಯ "ಲೋಕವಜೆಯೆ ಶುಚಿಯೆನಿಸಿರ್ದ್ದುಂ ಶಿವನುಟ್ಟ ಸೀರೆಯಂ ಪಿಡಿದವಗಡಿಪಳ್" ವಾಕ್ಯಖಂಡದ ಅರ್ಥವನ್ನು ಬಿಡಿಸಲು ಕೊಂಚ ಅವಕಾಶವಿದೆ.

ಸೀರೆ ಎಂದರೆ ಬಟ್ಟೆ. ಗಂಡಸರ ಉಡುಗೆಗೂ ಸೀರೆಯೆಂಬ ವ್ಯವಹಾರವಿದೆ[೨]. ನಮ್ಮ ಮಿಥಿಕಗಳಲ್ಲಿ ಶಿವನು ಆನೆಯ ತೊಗಲನ್ನು ಉಟ್ಟಿರುತ್ತಾನೆ ಇಲ್ಲ ಬತ್ತಲೆಯಿರುತ್ತಾನೆ. ಈ ಪದ್ಯದ ಸಂದರ್ಭಕ್ಕೆ ಶಿವನ ಬತ್ತಲೆ ವೇಷವು ಒಪ್ಪುತ್ತದೆ. ದಿಗಂಬರನಾದ ಶಿವನಿಗೆ ದಿಕ್ಕುಗಳೆ ಬಟ್ಟೆ. ಅವೆ ಶಿವನುಟ್ಟ ಸೀರೆ. ಕೀರ್ತಿಲಕ್ಷ್ಮಿಯು ದಿಕ್ಕುಗಳನ್ನು ಹಿಡಿದು ಅವಗಡಿಸಿದಳು, ಹರಡಿದಳು.

ನಮ್ಮಲ್ಲಿ "ಸೆರಗು ಹಿಡಿ" ಮಾತಿಗೆ "ಹಿಂಬಾಲಿಸು" ಎಂಬ ಧ್ವನಿಯಿದೆ. ಇದು ಹೊಗಳಿಕೆಯ ಮಾತಲ್ಲ. ಲಕ್ಷ್ಮೀಧರನ

ಕೀರ್ತಿಲಕ್ಷ್ಮಿಯು ಪರಪುರುಷನಾದ ಶಿವನ ಬಟ್ಟೆಯನ್ನು ಹಿಡಿಯುವುದು ಆಕೆಯ ಪಾವಿತ್ರ್ಯಕ್ಕೆ ಕುಂದು ತರುವಂತಹ ಸಂಗತಿ. ಹಾಗಿರುವಲ್ಲಿ ಆಕೆ ಶಿವನ ಸೀರೆಯನ್ನು ಹಿಡಿದರೂ ಲೋಕಕ್ಕೆ ಶುಭ್ರಳಾಗಿಯೇ ಕಂಡಳು. ಅದರಿಂದ ಲಕ್ಷ್ಮೀಧರನ ಕೀರ್ತಿಗೆ ಯಾವ ಕಡಮೆಯೂ ಉಂಟಾಗಲಿಲ್ಲ.

ಲಕ್ಷ್ಮೀಧರನ ದಾನಗಳ ಸಂಗತಿಯು ಭೂಮಿಯಲೆಲ್ಲ ಹರಡಿತ್ತು. ಅವನ ಧವಳ ಕೀರ್ತಿಯು ಎಲ್ಲ ದಿಕ್ಕುಗಳಿಗೂ ವ್ಯಾಪಿಸಿತ್ತು ಎಂಬುದೆ ಈ ಪದ್ಯದ ಆಶಯ.

ಟಿಪ್ಪಣಿಗಳು

೧. S.I.I.IV, ಸಂ ೨೭೬, ಪುಟ ೬೦-೬೬, ಸಾಲು ೯೫-೯೬

೨. "...ನಂದಿಮಿತ್ರನೆಂದನಯ್ಯ ಎನಗುಡಲಿಲ್ಲೇನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕೊಂಡೀಯಿಂ...", *ಭದ್ರಬಾಹು ಭಟಾರರ ಕಥೆ, ವಡ್ಡಾರಾಧನೆ, -ಡಿ.ಎಲ್.ನರಸಿಂಹಾಚಾರ್ (ಸಂ)*

## ೨. ವಸಂತಾಗಮನ

ಮಹಾಕಾವ್ಯದಲ್ಲಿ ಹದಿನೆಂಟು ರೀತಿಯ ವರ್ಣನೆಗಳಿರಬೇಕೆಂದು ಲಾಕ್ಷಣಿಕರ ಮತ. ಆ ವರ್ಣನೆಗಳು ಯಾವುವೆಂದರೆ:

ವಾರಿಧಿ ಪರ್ವತಂ ಪುರನಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತುನಂದನಮಂಬುಕೇಳಿ ಕಾಂ
ತಾರತಿ ಚಿಂತೆ ಮಂತ್ರ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟಮನೆಯ್ದೆ ಬಣ್ಣಿಪರ್

*(ಸೂಕ್ತಿ ಸುಧಾರ್ಣವಂ ೧-೭೬)*

ಪುರವಾರಾಸಿ ನಗರ್ತು ಚಂದ್ರ ತಪನೋದ್ಯಾನಾಂಬುಕೇಳೀ ಸುರಾ
ಸುರತಕ್ರೀಡ ವಿಪ್ರಲಂಭ ಲಲನಾಕಲ್ಯಾಣ ಪುತ್ರೋದಯಂ
ಸ್ಫುರಿತಾಳೋಚನ ಮಂತ್ರ ದೂತ ಗಮನಾಜಿ ಸ್ತ್ರೀಸುಖವ್ಯಾಪ್ತಿಗಳ್
ದೊರೆಕೊಳ್ಗುಂ ಕವಿವರ್ಣನಕ್ಕೆ ಪದಿನೆಂಟಂಗಂ ಮಹಾಕಾವ್ಯದೊಳ್

*(ಸೂಕ್ತಿ ಸುಧಾರ್ಣವಂ ೧-೭೭)*

ಉದಧಿ ಪುರಾಧಿಪ ಸುತ ಮಂ
ತ್ರದೂತಗಮನಾಜಿ ವಿರಹ ಪರಿಣಯ ಸುರತ
ರ್ತುದಿನೇಶ ಚಂದ್ರ ಮಧು ಕುಭೃ
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ

*(ಸೂಕ್ತಿ ಸುಧಾರ್ಣವಂ ೧-೭೮; ಉದಯಾದಿತ್ಯಾಲಂಕಾರಂ ೧-೧೩)*

ಲಾಕ್ಷಣಿಕರಲ್ಲಿ ಎಲ್ಲ ಹದಿನೆಂಟು ಬಗೆಗಳ ಬಗೆಗೂ ಒಮ್ಮತವಿಲ್ಲದಿದ್ದರೂ, ಕೆಲವನ್ನು ಎಲ್ಲರೂ ಅಂಗೀಕರಿಸುವುದು ವ್ಯಕ್ತವಾಗಿಯೇ ಇದೆ. ಋತು ವರ್ಣನೆ ಇಂತಹುದು ಒಂದು. ಲಾಕ್ಷಣಿಕ ಋತು ಎಂದಷ್ಟೇ ಹೇಳಿ-ಕವಿಯ ಸ್ವಭಾವ, ಕಾವ್ಯ ಸಂದರ್ಭಗಳಿಗೆ ಅನುಸಾರವಾಗಿ ಯಾವುದಾದರೊಂದು ಋತುವನ್ನು ವರ್ಣಿಸಲಿ ಎಂದಿರಬೇಕು-ಯಾವ ಋತುವೆಂದು ಸ್ಪಷ್ಟಪಡಿಸದೆ ಹೋದರೂ ಕವಿಗಳು ಮಾತ್ರ ವಸಂತವನ್ನು ಬಲವಾಗಿ ಹಿಡಿದಿದ್ದಾರೆ. ಬರಿಯ

ವಸಂತರಾಜನನ್ನು ಹೊಗಳಿದರೆ ಸಾಕೆ? ಕೋಗಿಲೆ, ಮಾವು, ಚಿಗುರು ಇತ್ಯಾದಿಗಳು ಯಥೋಚಿತ ಮರ್ಯಾದೆಗಳು ಸಂದಿವೆ. ವಸಂತನನ್ನು ಬಿಟ್ಟು ಕೋಗಿಲೆ ಎಲ್ಲಿಯದು ಎನ್ನುವಷ್ಟು ಅವಿನಾಭಾವದ ಸಂಬಂಧ; ಕಾಗೆಯ ಕಪ್ಪಿಗೂ ಕೋಗಿಲೆಯ ಕಪ್ಪಿಗೂ ವ್ಯತ್ಯಾಸವನ್ನು ತಿಳಿಯ ಬೇಕಾದರೆ ವಸಂತದವರೆಗೆ ಕಾಯಬೇಕಂತೆ. ವಸಂತನಿಲ್ಲದೆ ಕೋಗಿಲೆಗೆ ಪ್ರತ್ಯೇಕವಾದ ಸ್ಥಾನವಿಲ್ಲ. ಇನ್ನು ಮಾಮರ. ಪಂಪ ಕರ್ನಾಟಕಕಪಿಚೂತವನಚೈತ್ರ, ಅಷ್ಟು ಸಾಕು ಮಾಮರ ವಸಂತಗಳ ನಂಟು ಹೇಳುವುದಕ್ಕೆ.

ವಸಂತ ಕೇವಲ ಪಂಪಾದಿ ಪ್ರಾಚೀನರಿಗೆ ಮಾತ್ರ ಪ್ರಿಯನೆಂದು ತಿಳಿಯಬೇಡಿ. ಪಂಪನಂತೆಯೆ ಇತ್ತೀಚಿನ ನವೋದಯಾನಂತರದ ಕವಿಗಳೂ ಪಲ್ಲವಗಳ ಪಲ್ಲವಿಯಲಿ ಗರಿಗೆದರಿದ ಗೀತವನ್ನು ಎದೆ ತುಂಬಿಹಾಡಿ ವಸಂತನನ್ನು ಹೊಗಳಿ ಬಾರೋ ವಸಂತ ಎಂದು ಕರೆದಿದ್ದಾರೆ. ವಸಂತ ಬಂದ. ಋತುಗಳ ರಾಜನಲ್ಲವೆ? ದುಂಬಿ ತಳಿರು ಹೂ ಕೋಗಿಲೆಗಳ ಪರಿವಾರ ಸಮೇತನಾಗಿಯೇ ಬಂದ. ಹೊಸ ಭಾವನೆಗಳನ್ನು ಹೊಸ ಕಾಮನೆಗಳನ್ನು ಬಡಿದೆಬ್ಬಿಸಿದ. ವಸಂತ ಎಷ್ಟಾದರೂ ನವಚೇತೋಹಾರಿಯಲ್ಲವೆ? ಮರ ಗಿಡಗಳಿಗೆ ಗಿರಿವನಗಳಿಗೆ ಹೊಸ ಚಿಗುರನ್ನೂ ಹೊಸ ಜೀವವನ್ನೂ ತರುವನಲ್ಲವೆ? ಕವಿಗಳೂ ವಸಂತಗಾನಕ್ಕೆ ಆರಂಭಿಸಿದ್ದೆ ತಡ, ಹಿಂದಿನ ಕವಿಗಳು ಹೇಳಿದ್ದನ್ನೆ ಆಗಲಿ ಹೊಸ ಹುರುಪಿನಿಂದ ಹೇಳತೊಡಗುತ್ತಾರೆ.

ವಸಂತಾಗಮನದಿಂದ ಎಲ್ಲರಿಗೂ ಸಂತೋಷಾಗಮನವೆನ್ನೋಣವೆ? ಅಲ್ಲಿ ನೋಡಿ, ವಸಂತನಿಂದ ಹೊಸ ಚಿಗುರುಗಳನ್ನು ಪಡೆದ ಅಶೋಕದ ಮುಂದೆ ನಿಂತಿರುವ ರಾಮನನ್ನು. "ಎಲೆ ಅಶೋಕನೆ, ನೀನು ಹೊಸದಳಿರುಗಳಿಂದ ರಕ್ತನಾಗಿದ್ದೀಯೆ, ನಾನು ಪ್ರಿಯೆಯ ಶ್ಲಾಘ್ಯವಾದ ಗುಣಗಳಲ್ಲಿ ಅನುರಕ್ತನಾಗಿದ್ದೇನೆ. ನಿನ್ನನ್ನು ದುಂಬಿಗಳು ಮುತ್ತುತ್ತವೆ. ನನ್ನನ್ನು ಕಾಮನ ಬಿಲ್ಲಿನಿಂದ ಹೊರಟ ಕೂರ್ಪುಕಣೆಗಳು ಕುತ್ತುತ್ತವೆ. ಕನ್ನೆಯ ಪಾದಾಘಾತ ನಿನಗೆ ಬಲುಪ್ರಿಯ ವಾದುದು, ಕಾಂತೆಯ ಹೆಜ್ಜೆಯ ಸಪ್ಪಳ ನನಗೂ ಆನಂದವೆ. ನೋಡು. ನಾವಿಬ್ಬರೂ ಅದೆಷ್ಟು ಸಮರಾಗಿದ್ದೇವೆ, ಆದರೆ ನೀನು ಅಶೋಕ: ನಾನು ಸೀತೆಯನ್ನು ಕಳೆದುಕೊಂಡು ಸಶೋಕ" ಎನ್ನುತ್ತಿದ್ದಾನೆ. ವಸಂತ ವಿರಹಿಗಳಿಗೆ ಸಿಂಹದಂತೆ ಭೀಕರವಂತೆ; ರನ್ನನನ್ನು ಕೇಳಿ. ವಸಂತಕೇಸರಿ ಚಿತ್ರವನ್ನೆ ನಮ್ಮ ಮುಂದಿಡುತ್ತಾನೆ. ಹಸ್ತಿನಾವತಿಯ ತೋಟಗಳಿಗೆ ವಸಂತನೊಡನೆ ಚಿಗುರು ಕೋಗಿಲೆಗಳಷ್ಟೆ ಅಲ್ಲ ವಿರಹಿಗಳೂ ಬಂದರೆನ್ನುತ್ತಾನೆ ಪಂಪ. ಇತ್ತ ಮರಗಳಿಂದ ತಂಗಾಳಿ ಬೀಸಿದರೆ ಅತ್ತಲಿಂದ ವಿರಹಿಗಳ ಬಿಸುಸುಯ್ಗೆ ಬೀಸುತ್ತದೆ. ಕೋಗಿಲೆಯು ವಸಂತನ ಲಾಂಛನವೆಂದಾದರೆ ವಿರಹಿಯೂ ವಸಂತನ ಲಾಂಛನವೆನ್ನಬೇಕು. ಮರಗಳ ಎಲೆಗಳ ದಟ್ಟಣೆಯಲ್ಲಿ ಕಾಣದ ಹಾಗೆ ಕೋಗಿಲೆ ಕುಳಿತರೆ ವಿರಹಿಗಳು ಯಾರೂ ಸುಳಿಯದೆಡೆ ಕಾಣದಂತೆ ಕುಳಿತಿರುತ್ತಾರೆ. ಕೋಗಿಲೆಯದು ಕಪ್ಪು ಬಣ್ಣ ಕೆಂಪು ಕಣ್ಣುಳು: ವಿರಹಿಯದು ದುಃಖದಿಂದ ಬಾಡಿ ಕಪ್ಪಿಟ್ಟ ಮುಖ. ಅತ್ತು ಕೆಂಪಾದ ಕಣ್ಣುಗಳು. ಆದರೆ ಗಂಡು ಕೋಗಿಲೆ ಹೆಣ್ಣು ಕೋಗಿಲೆಯನ್ನು ಮಧುರವಾಗಿ ಕೂಗಿ ಕರೆದರೆ. ದೂರದ ಇನಿಯನನ್ನೊ ಇನಿಯಳನ್ನೊ ನೆನೆದು ದುಃಖಾರ್ತನಾದವನ್ನು ಹೊಮ್ಮಿಸುವುದು ವಿರಹಿಯ ಪಾಡು. ಇದೊಂದೆ ವಿರಹಿಗೂ ಕೋಗಿಲೆಗೂ ಇರುವ ವ್ಯತ್ಯಾಸ.

❑



## ಲೇಖಕರ ವಿಳಾಸಗಳು

೧. **ಪ್ರೊ. ಜಿ. ಅಬ್ದುಲ್ ಬಷೀರ್**
# ೫, ೮ನೆಯ ಅಡ್ಡರಸ್ತೆ,
ಬೈರಸಂದ್ರ, ಜಯನಗರ ೧ನೆಯ ವಿಭಾಗ
ಬೆಂಗಳೂರು-೫೬೦೦೧೧.

೧. **ಶ್ರೀಮತಿ ಸವಿತಾ ಸಿರಗೋಜಿ**
'ಕರ್ಮಯೋಗಿ'
# ೧-೧೪೯೫/೪೨,
ಗೋದುತಾಯಿ ನಗರ
ಗುಲಬರ್ಗಾ-೫೮೫೧೦೨.

೨. **ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ**
ನಂ.೬೮ 'ಬಿ' ಆಶ್ರಮದ ರಸ್ತೆ
ಜಯಲಕ್ಷ್ಮೀಪುರಂ
ಮೈಸೂರು-೫೭೦೦೧೨.

೩. **ಶ್ರೀ ಕೆ. ರಘುರಾಮ ಭಟ್**
#೫, ಶ್ರೀ ಗಣೇಶ, ೪ನೆಯ ಅಡ್ಡರಸ್ತೆ
ಶ್ರೀಕೃಷ್ಣದೇವಾಲಯ ಮುಖ್ಯರಸ್ತೆ
ಹೊಸಕೆರೆಹಳ್ಳಿ, ಬನಶಂಕರಿ ೨ನೆಯ ಹಂತ,
ದ್ವಾರಕಾನಗರ, ಬೆಂಗಳೂರು-೫೬೦೦೮೫.

೪. **ಡಾ. ಅಪ್ಪಣ್ಣ ಎನ್.ಹಂಜೆ**
ಇತಿಹಾಸದ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ
ಮಹಾವಿದ್ಯಾಲಯ,
ನವಲಗುಂದ-೫೮೨೨೦೮.

೫. **ಶ್ರೀಮತಿ ಹನುಮಾಕ್ಷಿ ಗೋಗಿ**
'ಕಾರ್ತಿಕಶ್ರೀ', ಎಚ್.ಐ.ಜಿ. ೨೭.
ನವನಗರ,
ಹುಬ್ಬಳ್ಳಿ-೫೮೦೦೨೫.

೬. **ಶ್ರೀ ಎಸ್.ಸುರೇಶ್ ನಾಗಲಮಡಿಕೆ**
ಸಂಶೋಧನ ವಿದ್ಯಾರ್ಥಿ,
ಎಂ.ವಿ.ಸೀ. ಸ್ನಾತಕೋತ್ತರ
ಸಂಶೋಧನ ಕೇಂದ್ರ,
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಎನ್.ಆರ್.
ಕಾಲೋನಿ, ಬೆಂಗಳೂರು-೫೬೦೦೧೯

೭. **ಶ್ರೀ ಟಿ.ವಿ. ಶ್ರೀನಾಥಶಾಸ್ತ್ರೀ**
ವಿಜ್ಞಾನಿ, ರಾಷ್ಟ್ರೀಯ ವೈಮಾಂತರಿಕ್ಷ
ಪ್ರಯೋಗ ಶಾಲೆಗಳು (ಎನ್.ಎ.ಎಲ್.)
ಬೆಂಗಳೂರು.

೮. **ಡಾ. ಎಸ್. ಲಕ್ಷ್ಮೀದೇವಿ**
ಸಹ ಅಧ್ಯಾಪಕಿ
ಕನ್ನಡ ಭಾಷೆ ಮತ್ತು ಅನುವಾದ ವಿಭಾಗ
ದ್ರಾವಿಡ ವಿಶ್ವವಿದ್ಯಾಲಯ
ಬೆಂಗಳೂರು.

೯. **ಶ್ರೀ ವೆಂಕಟೇಶ ಮೂರ್ತಿ. ಜಿ**
ವಿಂಡ್‌ರಿವರ್ ಸಿಸ್ಟಮ್ಸ್ ಇಂಕ್
ಇಂಡಿಯಾ ಲೈಸನ್ ಆಫೀಸ್
ಪಾನ್‌ಏಷಿಯಾ ಬಿಜನೆಸ್ ಸರ್ವಿಸಸ್
೪/೧, ಮಿಲ್ಲರ್ಸ್ ರಸ್ತೆ,
ಹೈಗ್ರೌಂಡ್ಸ್, ಬೆಂಗಳೂರು-೫೬೦೦೫೨.



# ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ
## ಹೊಸ ಪ್ರಕಟಣೆಗಳು

### ರಜತೋತ್ಸವ ಮಾಲೆ

| | | |
|---|---|---|
| ೧. | ಗ್ರಂಥಸಂಪಾದನಾ ಪರಿಭಾಷಾಕೋಶ | ೩೬-೦೦ |
| ೨. | ಸಾಹಿತ್ಯೋಪಾಸಕರು | ೨೦೦-೦೦ |
| ೩. | ವಾಸವಾಂಬ ಪುರಾಣ | ೧೫೦-೦೦ |
| ೪. | ತಿಮ್ಮಪ್ಪದಾಸರ ಕೀರ್ತನೆಗಳು | ೭೫-೦೦ |
| ೫. | ಬಿ.ಎಂ.ಶ್ರೀಕಂಠಯ್ಯ* | ೨೦-೦೦ |
| ೬. | ಎಂ.ವಿ. ಸೀತಾರಾಮಯ್ಯ | ೨೦-೦೦ |
| ೭. | ಶ್ರೀಕೃಷ್ಣಲೀಲಾಗಾನಂ | ೧೦೦-೦೦ |
| ೮. | ಕನ್ನಡ ತಿರುಕ್ಕುರುಳ್* | ೧೦೦-೦೦ |
| ೯. | ಕಾರಂತ ಕಿರಣ* | ೩೦-೦೦ |
| ೧೦. | ರಜತ ಸಿರಿ (ಸ್ಮರಣ ಸಂಚಿಕೆ)* | - |

### ಪ್ರತಿಷ್ಠಾನದ ಹೊಸ ಪ್ರಕಟಣೆಗಳು

| | | |
|---|---|---|
| ೧. | ಅಲಿಗೆ ಮೇಲಿನ ಹಸ್ತಪ್ರತಿಗಳು | ೧೦೦-೦೦ |
| ೨. | ವೆಂಕಟದಾಸರು ಮತ್ತು ಇತರ ಅದ್ವೈತ ಹರಿದಾಸರ ಕೀರ್ತನೆಗಳು | ೭೫-೦೦ |
| ೩. | ಕನ್ನಡವೆಂಬ ಕನ್ನಡಿ | ೩೦-೦೦ |
| ೪. | ಕನ್ನಡದ ಶರಣ ಎಂ.ಆರ್.ಶ್ರೀ. | ೩೦-೦೦ |
| ೫. | ಶ್ರೀಸಾಹಿತ್ಯ ಮಣಿ ಮಾಲೆ | ೧೫೦-೦೦ |
| ೬. | ಇಂಗ್ಲೀಷ್ ಗೀತಗಳು (ಮೂಲದೊಂದಿಗೆ) | ೧೦೦-೦೦ |
| ೭. | ಪ್ರೊ॥ ಡಿ.ಎಲ್.ಎನ್.ರ ಹೆಚ್ಚಿನ ಬರಹಗಳು, ಭಾಷಣಗಳು | ೨೦೦-೦೦ |
| ೮. | ಕುಂತಿಯ ಅಂತರಾಳ | ೫೦-೦೦ |
| ೯. | ಪರಿಷ್ಕೃತ ಹೊಸಗನ್ನಡದ ವ್ಯಾಕರಣ | ೧೦೦-೦೦ |
| ೧೦. | ಕ.ವೆಂ. ರಾಘವಾಚಾರ್ ಜೀವನ ಸಾಧನೆ | ೮೦-೦೦ |

### ಮುದ್ರಣದಲ್ಲಿ

೧೧. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ
೧೨. ಬಿ.ಎಂ.ಶ್ರೀ. ಪ್ರತಿಷ್ಠಾನ-೨೫
೧೩. ಎಂ.ವಿ.ಸೀ. ಸಮಗ್ರ ಸಾಹಿತ್ಯಮಾಲೆ-೭; ಪ್ರಾಚೀನ ಸಾಹಿತ್ಯ ಸಮೀಕ್ಷೆ
೧೪. ಸುವರ್ಣ ಕರ್ನಾಟಕ ಮಾಲೆ ವಿಶೇಷ ಸಂಪುಟಗಳು: ೧, ೨, ೩

*ಪ್ರತಿಗಳು ಮುಗಿದಿವೆ.

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ



## ನಮ್ಮ ಲೇಖಕರು

ಪ್ರೊ. ಜಿ. ಅಬ್ದುಲ್ ಬಷೀರ್

ಶ್ರೀಮತಿ ಸವಿತಾ ಸಿರಗೋಜಿ

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ

ಶ್ರೀ ಕೆ. ರಘುರಾಮ ಭಟ್

ಡಾ. ಅಪ್ಪಣ್ಣ ಎನ್.ಹಂಜೆ

ಶ್ರೀಮತಿ ಹನುಮಾಕ್ಷಿ ಗೋಗಿ

ಶ್ರೀ ಎನ್.ಸುರೇಶ್‌ನಾಗಲಮಡಿಕೆ

ಶ್ರೀ ಟಿ.ವಿ. ಶ್ರೀನಾಥಶಾಸ್ತ್ರೀ

ಡಾ. ಎಸ್. ಲಕ್ಷ್ಮೀದೇವಿ

ಶ್ರೀ ವೆಂಕಟೇಶ ಮೂರ್ತಿ. ಜಿ

ಎಂ.ವಿ.ಸೀ. ಸಂಶೋಧನ ಕೇಂದ್ರ